

ನಾ ಡೊಂಕಾದರೇನೋ ನಿನ್ನ ನಾಮ ಡೊಂಕೆ ವಿಠಲ || ಪ ||

ನದಿಯು ಡೊಂಕಾದರೇನು ಉದಕ ಡೊಂಕೆ ವಿಠಲ
ಕಬ್ಬು ಡೊಂಕಾದರೇನು ಸಿಹಿಯು ಡೊಂಕೆ ವಿಠಲ
ಪುಷ್ಪ ಡೊಂಕಾದರೇನು ಪರಿಮಳ ಡೊಂಕೆ ವಿಠಲ
ಆಕಳು ಡೊಂಕಾದರೇನು ಹಾಲು ಡೊಂಕೆ ವಿಠಲ
ಬಿಲ್ಲು ಡೊಂಕಾದರೇನು ಬಾಣ ಡೊಂಕೆ ವಿಠಲ
ನಾ ಹೊಲೆಯನಾದರೇನು ನಿನ್ನ ನಾಮ ಹೊಲೆಯೆ ವಿಠಲ
ಅಜ್ಞನಾದರೇನು ಕಾಯೊ ಸುಜ್ಞ ಪುರಂದರ ವಿಠಲ

---ಶ್ರೀ ಪುರಂದರದಾಸರು

ಸಂದರ್ಶಿಸಿ ಆನಂದಿಸಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು.



# ವಾರ್ಷಿಕ ಬ್ರಹ್ಮೋತ್ಸವಗಳು

20--11--92 ರಿಂದ 29--11--92 ವರೆಗೆ

## ಕಾರ್ಯಕ್ರಮ ವಿವರ

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 20--11--92 | ಶುಕ್ರವಾರ | ---- | ಅಂಕುರಾರ್ಪಣ |
| 21--11--92 | ಶನಿವಾರ | ಧ್ವಜಾರೋಹಣ | ಚಿಕ್ಕ ಶೇಷವಾಹನ |
| 22--11--92 | ಭಾನುವಾರ | ಟಾಂಜಾನ್ ಉತ್ಸವ | ಹಂಸವಾಹನ |
| 23--11--92 | ಸೋಮವಾರ | ಮುತ್ತಿನ ಚಪ್ಪರವಾಹನ | ಸಿಂಹವಾಹನ |
| 24--11--92 | ಮಂಗಳವಾರ | ಕಲ್ಪವೃಕ್ಷವಾಹನ | ಹನುಮದ್ವಾಹನ |
| 25--11--92 | ಬುಧವಾರ | ಪಲ್ಲಕ್ಕಿ ಉತ್ಸವ<br>--ಸಂಜೆ -ವಸಂತೋತ್ಸವ | <br>ಗಜವಾಹನ |
| 26--11--92 | ಗುರುವಾರ | ಸರ್ವಭೂಪಾಲವಾಹನ | ಗರುಡೋತ್ಸವ |
| 27--11--92 | ಶುಕ್ರವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 28--11--92 | ಶನಿವಾರ | ರಥೋತ್ಸವ | ಅಶ್ವವಾಹನ |
| 29--11--92 | ಭಾನುವಾರ | ಪಲ್ಲಕ್ಕಿ ಉತ್ಸವ, ತೀರ್ಥವಾರಿ | ಧ್ವಜಾವರೋಹಣ |

ಸೂಚನೆ ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಸಂಗೀತ ಹರಿಕಥೆ, ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ ಹೆಚ್ಚಿನ ವಿವರಗಳಿಗೆ ತಮ್ಮ ಬಳಿಯ ತಿ ತಿ ದೇ ವಿಚಾರಣಾ ಕಚೇರಿಯಲ್ಲಿ ಕೇಳಿ ತಿಳಿಯಿರಿ

ನೀವೂ ಬನ್ನಿ ತಿ ತಿ ದೇ ನಿಮ್ಮವರನ್ನೂ ಕರೆತನ್ನಿ



ಸಂಪುಟ ೨೩] ಅಕ್ಟೋಬರ್ ೧೯೯೨ [ಸಂಚಿಕೆ ೫

# ವಿಷಯಸೂಚಿ



ಮುಖಚಿತ್ರ ತಿರುಮಲೆಯಲ್ಲಿ ಬ್ರಹ್ಮೋತ್ಸವ ದೃಶ್ಯಗಳು
ಹಿಂಬದಿಯಲ್ಲಿ ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಆಲಯ
ಒಳಗಡೆ ಭಾರತದ ರಾಷ್ಟ್ರಪತಿ ಡಾ ಶಂಕರದಯಾಳಶರ್ಮ ಅವರು
(1)ತಿರುಮಲೆ (2) ತಿರುಚಾನೂರುಗಳನ್ನು ಸಂದರ್ಶಿಸಿದಾಗಿನ ಚಿತ್ರಗಳು


ಗೌರವ ಸಂಪಾದಕರು
ಶ್ರೀ ಎಂ ವಿ ಎಸ್ ಪ್ರಸಾದ್, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ
ತಿ ತಿ.ದೇ., ತಿರುಪತಿ.

ಸಂಪಾದಕ
ಕೆ ಸುಬ್ಬಾರಾವು ಎಂ ಎ.

ಉಪಸಂಪಾದಕ
ಬಿ ಎನ್ ಶ್ರೀನಿವಾಸನ್ ಎಂ.ಎ.,

ಮುದ್ರಣ
ಎಂ ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ


ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ೧--೦೦**
**ವಾರ್ಷಿಕ ಚಂದಾ ೧೨--೦೦**




ಕೃಷ್ಣ ದ್ವೈಪಾಯನ ವ್ಯಾಸರಿಗೆ ನಾಲ್ಕು ಮಂದಿ ಶಿಷ್ಯರು ವೇದಗಳನ್ನು ಋಗ್, ಯಜುರ್, ಸಾಮ, ಅದರ್ವವೆಂದು ವಿಂಗಡಿಸಿ ನಾಲ್ಕು ಮಂದಿಗೂ ಒಂದೊಂದು ವೇದವನ್ನು ವಿವರಿಸಿ ಅದನ್ನು ಪ್ರಾಚುರ್ಯದಲ್ಲಿ ತರಲು ಹೇಳಿದರು ಶಂಕರರ ನಾಲ್ಕು ಮಂದಿ ಪ್ರದಮ ಶಿಷ್ಯರೂ--ವಿಶೇಷವಾಗಿ ನನ್ನ ತಿಳಿವಿನ ಸ್ಪಷ್ಟತೆಗಾಗಿಯೇ ಬರೆದುಕೊಳ್ಳುತ್ತಿದ್ದೇನೆ ಎಂದ ಸುರೇಶ್ವರರು, ಗುರುವಿನ ಮನೋಗತವನ್ನು ಅರಿಯುವಲ್ಲಿ ಗುರುವಿನ ಬಳಿ ಕುಳಿತು ವಿವರ ಪಡೆಯುವುದರಲ್ಲಿ ಸಫಲರಾದರು ಆಚಾರ್ಯ ಮಧ್ವರಿಗೆ ಅನೇಕ ಶಿಷ್ಯರು ಇದ್ದರೂ ಟೀಕಾಚಾರ್ಯರೆಂದು ಹೆಸರಾದ ಜಯತೀರ್ದರ ಹಿರಿಮೆ ಗರಿಮೆಗಳು ಬೇರೆಯೇ ಆದವು. ಜಯತೀರ್ದರು ಆನಂದ ತೀರ್ದರ ನೇರ ಶಿಷ್ಯರೇನಲ್ಲವಾದರೂ ಸಮೀಪವರ್ತಿಗಳು ಎಂಬ ನಂಬಿಕೆಯುಂಟು ಇಂತಹ ಒಂದು ಗುರುಶಿಷ್ಯ ಪರಂಪರೆಯಲ್ಲಿ ತಲೆಮಾರುಗಳ ಅಂತರ ಕಳೆದ ಮೇಲೆ ಜನಿಸಿ ಗುರುವಿನ ಮನೋಗತವನ್ನು ಅವಗತ ಮಾಡಿಕೊಂಡದ್ದು ವೇದಾಂತ ದೇಶಿಕರ ವೈಶಿಷ್ಟ್ಯ ರಾಮಾನುಜರ ಸಿದ್ಧಾಂತವನ್ನು ಪೂರ್ಣವಾಗಿ ಕಂಡದ್ದೇ ಅಲ್ಲದೆ ಇತರರಿಗೂ ಮನಗಾಣಿಸುವಂತೆ ಮಾಡುವಲ್ಲಿ ವೇದಾಂತ ದೇಶಿಕರ ಕೃಷಿ ಬಹು ದೊಡ್ಡದು

ಶ್ರೀ ವೆಂಕಟೇಶ್ವರ ಸ್ವಾಮಿಯ ದೇವಾಲಯದ ಗಂಟೆಯೇ ವೆಂಕಟನಾದರಾಗಿ ಅವತಾರ ಪಡೆಯಿತು- ಇರಬೇಕು--ಹರಿಪಾರಮ್ಯವನ್ನು ವಿಶಿಷ್ಟಾದ್ವೈತ ಸಿದ್ಧಾಂತವನ್ನು ತಮ್ಮ ಸರ್ವ ಸಾಮರ್ದ್ಯದಿಂದಲೂ ಗಂಟಾಘೋಷವಾಗಿ ಜಗತ್ತಿಗೆ ವಿವರಿಸಿದ ದೇಶಿಕರು ಗಂಟಾವತಾರರೆಂದು ಪ್ರಸಿದ್ಧರಾದುದರಲ್ಲಿ ಆಶ್ಚರ್ಯವೇನಿಲ್ಲ ಸಾಮಾನ್ಯ ಮಾನವಾಯುಷ್ಯದ ನೂರು ವರುಷಗಳನ್ನು ಒಬ್ಬ ಹೇಗೆ ಆದರ್ಶಮಯವಾಗಿ, ಧ್ಯೇಯಪರವಾಗಿ ಬಳಸಿಕೊಳ್ಳಬಹುದು ಎಂಬುದಕ್ಕೆ ದೇಶಿಕರ ಜೀವನ ದೃಷ್ಟಾಂತ ವಾಗುತ್ತದೆ

ನಾನು ಅಪರಾದ ಚಕ್ರವರ್ತಿ - ಜೀವನ ದೈನ್ಯವನ್ನ - ನೈಚ್ಯವನ್ನ ಹೀಗೆ ವಿವರಿಸುತ್ತಲೇ, ಉದ್ಧಾರಕ್ಕಾಗಿ ವೆಂಕಟೇಶ್ವರನ ದಯಾದೇವಿಯನ್ನು ಬೇಡುವಿಕೆ, ಭಕ್ತಭಾಗವತರ ಪಾದದೂಳು ತಲೆಯ ಮೇಲಿರಲಿ ಎಂಬ ಹಾರೈಕೆ, ಅವರಲ್ಲಿ ಸಹಜವೆಂದಾದರೂ, ಅಪ್ಪಯ ದೀಕ್ಷಿತರಂತಹ ವಿದ್ವಾಂಸರು ದೇಶಿಕರ ಕೃತಿಯ ಸೂಕ್ಷ್ಮಗಳನ್ನು ವಿವರಿಸುವುದು ಕಷ್ಟಸಾಧ್ಯವೆಂದು ಅವರ ಯಾದವಾಭ್ಯುದಯದ ವಿವರಣೆ ನೀಡುವಲ್ಲಿ ಹೇಳುವಂತೆ ಪ್ರಶಂಸೆಗೆ ಪಾತ್ರವಾದ ಕೃತಿ ರಚನೆ ಮಾಡುವುದು ಇತರರಿಗೆ ಸಹಜವಾಗದೇನೊ

ವೇದಾಂತ ದೇಶಿಕರು ಕಾವ್ಯ, ನಾಟಕ, ಸ್ತೋತ್ರ, ಬಗವದ್ವಿಷಯಗಳ ಬಗ್ಗೆ ಬರೆದದ್ದುಂಟು ಅವರಷ್ಟು ಕೃತಿ ರಚನೆ ಮಾಡಿದವರು ಇತಿಹಾಸದಲ್ಲಿ ಅಪರೂಪ ಇಷ್ಟಾದರೂ ಇತರರ ಮಕ್ಕಳನ್ನು ಮೆಚ್ಚುವ ಔದಾರ್ಯ ಅವರಲ್ಲಿದ್ದಿತು ಎಂಬುದು ಮುಖ್ಯ

ಪ್ರಸ್ಥಾನತ್ರಯ ಪಾಶುರಗಳ ಎರಡು ದಡಗಳ ನಡುವೆ ಪಯಣಿಸಿದ ಸ್ರೋತ ವಿಶಿಷ್ಟಾದ್ವೈತ ಇಲ್ಲಿ ದೇಶಿಕರು ಎರಡೂ ದಡಗಳ ಲಘು ಬಿಗಿ, ತಗ್ಗು, ತೆವರುಗಳ ನ್ನು, ಪರಿಸ್ಫುಟವಾಗಿ ಪರಿಚಯ ಮಾಡಿಕೊಂಡು ಒಂದರಂತೆ ಇನ್ನೊಂದು ಎಂಬುದನ್ನು ಮನಗಾಣಿಸುತ್ತ ನಡೆದವರು ಅವರು ಸಂಸ್ಕೃತದಲ್ಲಿ ದ್ರವಿಡವೇದಗಳ ಸಾರವನ್ನು ನೀಡಿರುವುದು ಈ ಮಾತಿಗೆ ಪುಷ್ಟಿ ನೀಡುತ್ತದೆ

ಪ್ರಶ್ನೆ ಇವರು ಎಷ್ಟು ಮಾಡಿದರು ಎಂಬುದಲ್ಲ ಅದರಲ್ಲಿ ನಾವು ಎಷ್ಟು ಸ್ವೀಕರಿಸಿದ್ದೇವೆ ಎಂಬುದು ಸ್ವಯಾರ್ಜಿತವೂ ಪಿತ್ರಾರ್ಜಿತವೂ ಏನಿಲ್ಲದಿದ್ದರೂ ಹಸ್ತಿಶೈಲದಲ್ಲಿ ನನ್ನ ಪಿತಾಮಹದನ ಇರುವನೆಂಬ ನಂಬಿಕೆ ಅವರದು ಅವರ ಈ ನಂಬಿಕೆಯೊಡನೆಯೇ ಅದರ ಕಾರ್ಯಕಾರಣ ಸಂಬಂದ ವಿವರಣೆಯ ದೇಶಿಕರ ಕೃತಿಗಳಿಗೂ ನಾವು ವಾರಸುದಾರರಾಗಿದ್ದೇವೆ ಇಂತಲ್ಲಿ ವೇದಾಂತ ದೇಶಿಕರ ಅಧ್ಯಯನದಿಂದ ಅವರ ಉತ್ಸವವನ್ನು ಆಚರಿಸುವಂತೆ ಆಗಲಿ ಎಂದು ವೆಂಕಟೇಶ್ವರನ ದಯಾದೇವಿಯನ್ನು ಬೇಡುವ

---ಇತಿ ಶಂ-



# ಶ್ರೀಮದ್ವೇಂಕಟನಾಥರು

— ಎಂ.ವಿ ಸಂಪತ್ಕುಮಾರಾಚಾರ್

ಶ್ರೀ ಹಯಗ್ರೀವ ಸದ್ಭಕ್ತಂ
ಶ್ರೀ ಹಸ್ತಿಗಿರಿವಾಸಿನಮ್
ಅನೇಕ ಶಾಸ್ತ್ರಸಾರಜ್ಞಂ
ವೇದಾಂತಾರ್ಯ ಮಹಂ ಭಜೇ

ಲೋಕದಲ್ಲಿ ಜನ್ಮತಾಳಿದ ಮೇಲೆ, ಪ್ರಾತಸ್ಸ್ಮರಣೀಯರಾದ, ಪುಣ್ಯಶ್ಲೋಕರಾದ ಕೆಲವು ಮಹನೀಯರನ್ನಾದರೂ, ಪ್ರತಿದಿನ ಸ್ಮರಿಸದೇ ಇದ್ದರೆ ಮಾನವ ಜನ್ಮಕ್ಕೆ ಸಾರ್ಥಕ್ಯವಿಲ್ಲ ಅಂತಹ ಮಹನೀಯರಲ್ಲಿ ಒಬ್ಬರಾದ ಶ್ರೀಮದ್ವೇಂಕಟನಾದರನ್ನು ಸ್ವಲ್ಪಮಟ್ಟಿಗೆ ಸ್ಮರಿಸೋಣ

ವಿಶಿಷ್ಟಾದ್ವೈತ ಸಿದ್ಧಾಂತವನ್ನು ಹೆಚ್ಚು ಪ್ರಚಾರಕ್ಕೆ ತಂದ ಮಹನೀಯರಲ್ಲಿ ಶ್ರೀಮದ್ರಾಮಾನುಜಾಚಾರ್ಯರ ಅನಂತರ ವೇದಾಂತದೇಶಿಕರು ಪ್ರಮುಖರು

ಈ ಮಹಾನುಭಾವರು ಕಾಂಚೀನಗರದ "ತೂಪ್ಪಿಲ್" ಎಂಬ ಪುಣ್ಯಸ್ಥಳದಲ್ಲಿ ಅವತರಿಸಿದರು ಶ್ರೀಯುತರಾದ ಅನಂತಸೋಮಯಾಜಿಗಳು ಇವರ ಜನಕರು ಶ್ರೀಮತಿ ತೋತಾರಾಂಬಾ ಎಂಬುವರು ಇವರಿಗೆ ಜನ್ಮನೀಡಿದ ಸದ್ಗೃಹಿಣಿ ಈ ದಂಪತಿಗಳಿಗೆ ಅನೇಕ ಕಾಲ ಸಂತಾನಲಾಭವಿಲ್ಲದಿರಲು ಅದೇ ಚಿಂತೆಯಲ್ಲಿ ಭಗವದ್ಧ್ಯಾನ ನಿರತರಾಗಿರುತ್ತಿದ್ದರು ಹೀಗಿರಲು ಒಂದು ದಿನ ಸ್ವಪ್ನದಲ್ಲಿ ಶ್ರೀಮತಿ ತೋತಾರಾಂಬಾ ಅವರಿಗೆ ಶ್ರೀನಿವಾಸನು ದರ್ಶನವಿತ್ತು, ತನ್ನ ಸೇವೆಯಿಂದ ಅವರಿಗೆ ಸತ್ಪುತ್ರ ಲಾಭವಾಗುವುದೆಂದು ಅನುಗ್ರಹಿಸಿದನಂತೆ ಇದರಿಂದ ಆನಂದಭರಿತರಾದ ದಂಪತಿಗಳು ಆದಷ್ಟು ಕ್ಷಿಪ್ರವಾಗಿ ತಿರುಪತಿಗೆ ಯಾತ್ರೆ ಹೊರಟು, ಅಲ್ಲಿ ಭಕ್ತಿಪುರಸ್ಸರವಾಗಿ ಶ್ರೀನಿವಾಸನ ದರ್ಶನ ಮಾಡಿದರಂತೆ ಅಲ್ಲಿ ಮತ್ತೊಮ್ಮೆ ಶ್ರೀನಿವಾಸನು ಸ್ವಪ್ನದಲ್ಲಿ ಕಾಣಿಸಿಕೊಂಡು, ಒಬ್ಬ ಬಾಲಕನ ರೂಪದಲ್ಲಿ ಬಂದು, ಒಂದು ಘಂಟೆಯನ್ನು ಶ್ರೀಮತಿ ತೋತಾರಾಂಬಾ ಅವರಿಗೆ ಕೊಟ್ಟು ಅದನ್ನು ನುಂಗಿದರೆ ಸತ್ಪುತ್ರಜನನವಾಗುವುದೆಂದು ತಿಳಿಸಿ ಕಣ್ಮರೆಯಾದನಂತೆ ಮಾರನೆಯ ದಿವಸ ದೇವಸ್ಥಾನದಲ್ಲಿದ್ದ ಗಂಟೆ ಅಗೋಚರವಾಯಿತಂತೆ ಅದನ್ನು ಯಾರೋ ಅಪಹರಿಸಿರಬೇಕೆಂದು ಶಂಕಿಸಿ ಹುಡುಕುತ್ತಾ ಇರುವಾಗ ಸ್ವಾಮಿಯು ಅರ್ಚಕರ ಮೂಲಕ ತನ್ನ ಇಚ್ಛೆಯಂತೆಯೇ ಅದು ಮಾಯವಾಗಿದೆಯೆಂದು ತಿಳಿಸಿ, ಅದನ್ನು ಯಾರೂ ಅಪಹರಿಸಿಲ್ಲವೆಂದೂ ವಿವರಿಸಿದನಂತೆ ಈ ಅಂಶವನ್ನು ಸ್ವತ ವೇಂಕಟನಾಥರೇ ಗಂಟೆಯ ಅಂಶದಿಂದ ತಾವು ಜನಿಸಿದ್ದೆಂದು ಹೇಳಿಕೊಂಡಿರುತ್ತಾರೆ "ಗಂಟಾ ಹರ ಸಮಜನಿಷ್ಟ ಯದಾತ್ರನೇತಿ" ಎಂದು

ಈ ಸಂದರ್ಭವು ನಡೆದ ಕೆಲವು ವರ್ಷಗಳನಂತರ ಶಾಕ 1191 ನೆಯ ವಿಭವ ಸಂವತ್ಸರದ ಭಾದ್ರಪದ ಶುಕ್ಲದಶಮಿ, ಶ್ರವಣನಕ್ಷತ್ರದ ಸುದಿನ (ಕ್ರಿ ಶ 1268) ("ಶ್ರೋಣಾ ನಕ್ಷತ್ರಂ ವಿಷ್ಣುರ್ದೇವತಾ" - ಎಂದು ಶ್ರುತಿಯು ಉದ್ಘೋಷಿಸಿರುವಂತೆ) ಶ್ರೀಮತಿ ತೋತಾರಾಂಬಾ ಅವರು ಸುಪುತ್ರನನ್ನು ಪ್ರಸವಿಸಿದರಂತೆ ಶ್ರೀನಿವಾಸನ ಅನುಗ್ರಹದಿಂದ ಜನಿಸಿದರಾದ್ದರಿಂದ ಅನಂತಸೋಮಯಾಜಿಗಳು ಆ ಮಗುವಿಗೆ "ವೇಂಕಟನಾದ" ನೆಂದೇ ನಾಮಕರಣ ಮಾಡಿದರಂತೆ ಈ ಬಾಲಕ ಬಹಳ ಚಿಕ್ಕವಯಸ್ಸಿನಲ್ಲಿಯೇ ತಮ್ಮ ಸೋದರಮಾವನಾದ ಆತ್ರೇಯ ರಾಮಾನುಜಾಚಾರ್ಯರೆಂಬುವರ ಸನ್ನಿಧಿಯಲ್ಲಿ ವಿದ್ಯಾಭ್ಯಾಸವನ್ನು ಆರಂಭಿಸಿ ಸ್ವಪ್ರತಿಭೆಯಿಂದ ಕ್ಷಿಪ್ರವಾಗಿ ಅನೇಕ ವಿದ್ಯೆಗಳನ್ನು ಅಭ್ಯಾಸ ಮಾಡಿದರಂತೆ "ಮಾತುಲಾತ್ತಕಲಾ ಕಲಾ" ಎಂಬುದರಿಂದ ಈ ಅಂಶವು ಸ್ಪಷ್ಟವಾಗುತ್ತದೆ

ಶಾಸ್ತ್ರೋಕ್ತ ಸಮಯದಲ್ಲಿ ಉಪನಯನಾದಿಗಳು ನಡೆದು, ವಿದ್ಯಾಭ್ಯಾಸವು ಮುಂದುವರಿಯಿತು ಇವರ ಕುಶಾಗ್ರ ಬುದ್ಧಿಯಿಂದ ವಿದ್ವದ್ವರೇಣ್ಯರೆಲ್ಲರೂ ವಿಸ್ಮಿತರಾಗುತ್ತಿದ್ದರು ಈ ಮಹನೀಯರು ತಮ್ಮ 20 ನೆಯ ವಯಸ್ಸಿನೊಳಗೆ ಸಕಲ ಶಾಸ್ತ್ರಗಳನ್ನು ಅಧ್ಯಯನಮಾಡಿ ಕರತಲಾಮಲಕ ಮಾಡಿಕೊಂಡರು ವೇದ ವೇದಾಂತ, ತರ್ಕ, ಮೀಮಾಂಸಾ ಮೊದಲಾದ ಅನೇಕ ಶಾಸ್ತ್ರಗಳಲ್ಲಿ ಅಗಾಧಪಾಂಡಿತ್ಯವನ್ನು ಸಂಪಾದಿಸಿಕೊಂಡರು ಈ ವಿಚಾರವನ್ನು ತಾವೇ ತಿಳಿಸಿಕೊಂಡಿರುತ್ತಾರೆ

"ವಿಂಶತ್ಯಬ್ದೇ ವಿಶ್ರುತ ನಾನಾ
ವಿಧವಿದ್ಯ ತ್ರಿಂಶದ್ವಾರಂ
ಪಾರಿತಶಾರೀರಕ ಭಾಷ್ಯ"

- ಎಂದು ವಿದ್ಯಾಭ್ಯಾಸವು ಪೂರ್ಣವಾದ ನಂತರ ಆ ಕಾಲದ ಪದ್ಧತಿಯಂತೆ ಇವರಿಗೆ "ತಿರುಮಂಗೈ" ಎಂಬ ಕನ್ಯಾರತ್ನದೊಡನೆ ವಿವಾಹವಾಯಿತು

ಕಾಲಕ್ರಮದಲ್ಲಿ ಇವರು ತೀರ್ಥಯಾತ್ರೆ ಮಾಡುತ್ತಾ, 'ತಿರುವಹೀಂದ್ರಪುರದಲ್ಲಿ' ಕೆಲವು ವರ್ಷಗಳ ಕಾಲ ವಾಸಮಾಡಿ ಉಪಾಸನಾ ಮಹಿಮೆಯಿಂದ ಹಯಗ್ರೀವನನ್ನು ಒಲಿಸಿಕೊಂಡರು ಸ್ವತ ವಿದ್ವಾಂಸ ಪಂಡಿತರಾಗಿದ್ದ ಇವರಿಗೆ ಹಯಗ್ರೀವನ ಅನುಗ್ರಹದಿಂದ ಪಾಂಡಿತ್ಯವೂ ಕವಿತಾಸಾಮರ್ಥ್ಯವೂ ದ್ವಿಗುಣವಾಗಿ ಮತ್ತಷ್ಟು ವಿಕಸಿತವಾಯಿತು

ಅದೇ ಸ್ಥಳದಲ್ಲಿ ಇವರು 'ಶ್ರೀ ಹಯಗ್ರೀವ ಸ್ತೋತ್ರ"ವನ್ನು ರಚಿಸಿದರೆಂದು ತಿಳಿದುಬರುತ್ತದೆ

ಇವರು ರಚಿಸಿರುವ ಗ್ರಂಥಗಳು ಅಪರಿಮಿತವಾಗಿವೆ ಒಬ್ಬ ಮನುಷ್ಯನು ತನ್ನ ಜೀವಿತಕಾಲದಲ್ಲಿ ಇಷ್ಟು ಗ್ರಂಥಗಳನ್ನು ರಚಿಸುವುದು ಸಾಧ್ಯವೇ? ಎಂದು ಆಶ್ಚರ್ಯಪಡುವಷ್ಟು ಬೃಹತ್ತಾಗಿದೆ -- ಆ ರಾಶಿ ಅಲ್ಲದೆ ಗ್ರಂಥಗಳಲ್ಲಿ ವೈವಿಧ್ಯವಿದ್ದು, ಸರ್ವಶಾ



ಸ್ಥಗಳಲ್ಲೂ ಇವರಿಗಿದ್ದ ಅಗಾದಪಾಂಡಿತ್ಯದ ಪ್ರೌಡಿಮೆಯು ಪ್ರದರ್ಶಿತವಾಗುತ್ತದೆ ಆ ಗ್ರಂದಗಳು ಈ ರೀತಿಯಾಗಿವೆ - ಸ್ತೋತ್ರಗಳು ೩೨ ಕಾವ್ಯನಾಟಕಗಳು ೭ ಶಾಸ್ತ್ರಗ್ರಂದಗಳು ೨೪ ರಹಸ್ಯಗ್ರಂದಗಳು ೩೨ ತಮಿಳು ಪ್ರಬಂದಗಳು ೨೪ ಬಗವದ್ವಿಷಯ ೧ ಈ ರೀತಿಯಾಗಿ ಒಟ್ಟು ಗ್ರಂಧಗಳ ಸಂಖ್ಯೆ ೧೨೦ ಅಲ್ಲದೆ ಅನೇಕ ಗ್ರಂದಗಳಿಗೆ ಇವರು ವ್ಯಾಖ್ಯಾನವನ್ನು ವಿರಚಿಸಿರುತ್ತಾರೆ ಶ್ರೀ ಭಗವದ್ರಾಮಾನುಜರ "ಗೀತಾಭಾಷ್ಯಕ್ಕೆ" ಇವರು ಅನುಗ್ರಹಿಸಿರುವ "ತಾತ್ಪರ್ಯಚಂದ್ರಿಕಾ" ಅತ್ಯಮೋಘವಾದ ವ್ಯಾಖ್ಯಾನವೆಂದು ಪ್ರಸಿದ್ಧವಾಗಿದೆ ಇವರ "ತತ್ವ ಮುಕ್ತಾಕಲಾಪ" ಗ್ರಂದವು ಅತ್ಯುತ್ಕೃಷ್ಟವಾದ ಗ್ರಂದ ರತ್ನವೆನಿಸಿಕೊಂಡಿದೆ ಆದ್ದರಿಂದಲೇ "ಸರ್ವಜ್ಞತ್ವಂ ತತ್ತ್ವ ಮುಕ್ತಾಕಲಾಪೇ" ಎಂದು ಪ್ರಸಿದ್ಧಿ ಇದೆ ಈ ಗ್ರಂದಕ್ಕೆ ತಾವೇ ವ್ಯಾಖ್ಯಾನವನ್ನು ಬರೆದಿರುತ್ತಾರೆ

ಇವರಿಗ "ಸರ್ವತಂತ್ರಸ್ವತಂತ್ರ" ರಂದೂ "ಕವಿತಾರ್ಕಿಕ- ಸಿಂಹ" ಎಂದೂ ಅನೇಕ ಸಾರ್ಥಕವಾದ ಪ್ರಶಸ್ತಿಗಳಿವೆ

ಇವರ "ಪಾದುಕಾಸಹಸ್ರ"ಗ್ರಂದವುಮತ್ತೊಂದು ಅಮೋಘವಾದ ಗ್ರಂದರತ್ನ ಈ ವಿಚಾರದಲ್ಲಿ ಒಂದು ಕದೆಯು ಪ್ರಚಾರದಲ್ಲಿದೆ ಇವರಿಗೂ ಪಿಳ್ಳೈ ಲೋಕಾಚಾರ್ಯರ ಸಹೋದರರಾದ ಅಳಹಿಯಮಣವಾಳಪ್ಪೆರುಮಾಳ್ ಎಂಬವರಿಗೂ ಸ್ಪರ್ದೆ ಏರ್ಪಟ್ಟು, ಒಂದೇ ರಾತ್ರಿ ಸಾವಿರ ಶ್ಲೋಕಗಳನ್ನು ರಚಿಸಬೇಕೆಂದು ಒಪ್ಪಂದವಾಯಿತಂತೆ ಅದರಂತೆ ರಂಗನಾದಸ್ವಾಮಿಯ ದೇವಸ್ಥಾನದಲ್ಲಿ ಈ ಇಬ್ಬರು ಮಹನೀಯರೂ ಶ್ರೀರಂಗನಾಥನ ಪಾದುಕಾ ವಿಚಾರವಾಗಿ ಬರೆಯಲು ಉಪಕ್ರಮಿಸಿದರಂತೆ ಮಾರನೆಯದಿನ ಪ್ರಾತ ಕಾಲ ವೇಂಕಟನಾದರು ಸಾವಿರ ಶ್ಲೋಕಗಳನ್ನು ರಚಿಸಿ "ಶ್ರೀ ಪಾದುಕಾಸಹಸ್ರ" ವೆಂದು ನಾಮಕರಣಮಾಡಿದರಂತೆ ಶ್ರೀ ಅಳಹಿಯ ಮಣವಾಳಪ್ಪೆರುಮಾಳರು "ಪದಕಮಲ ಸಹಸ್ರ"ವೆಂದು ಬರೆಯಲು ಆರಂಭಿಸಿ 300 ಶ್ಲೋಕಗಳನ್ನು ಮುಗಿಸಿದ್ದರಂತೆ ಆಗ ವೇಂಕಟನಾದರು ಇದರಿಂದ ಅಹಂಕಾರ ಪ್ರದರ್ಶಿಸದೆ, ತಮ್ಮ ದಾಸ್ಯ ಭಾವವನ್ನು ಸೂಚಿಸುತ್ತಾ ಹೀಗೆ ಹೇಳಿದರಂತೆ--

"ಸೂತೇ ಸೂಕರಯುವತಿ
ಸುತಶತಮತ್ಯಂತ ದುರ್ಲಭಂ ರುಟಿತಿ
ಕರಿಣೀ ಚಿರಾಯಸೂತೇ
ಸಕಲ ಮಹೀಪಾಲಲಾಲಲಿತಂ ಕಲಭಂ

ಎಂದು ತಿಳಿಸಿ ಸಾವಿರ ಶ್ಲೋಕಗಳಿಗಿಂತ ಅವರ 300 ಶ್ಲೋಕಗಳೇ ಉತ್ತಮವಾಗಿವೆಯೆಂದು ಹೇಳಿದರಂತೆ

ಪೂರ್ವಾಚಾರ್ಯರಲ್ಲಿ ಇವರಿಗಿದ್ದ ಭಕ್ತಿಗೌರವವು ಅನ್ಯಾದೃಶವಾದುದು "ಆ ಚಾ ರ್ಯಾ ದಿ ಹ ದೇವತಾಂ ಸಮದಿಕಾಮನ್ಯಾಂ ನಮನ್ಯಾಮಹೇ" ಎಂದು ಹೇಳಿ ಇದನ್ನು ಸಮರ್ಥಿಸಿರುತ್ತಾರೆ ಮತ್ತೊಂದು ಕಡೆ ಆಚಾರ್ಯರ ಭಕ್ತರ ಅಡಿದಾವರೆಯಲ್ಲಿ ನನ್ನ ತಲೆಯನ್ನು ಇಡುತ್ತೇನೆ "ವಹಾಮಿಚರಣಾಂಬುಜಂ ಪ್ರಣತಶಾಲಿನಾ ಮೌಳಿನಾ" ಎಂದು ಹೇಳಿ, ಆ ರೀತಿ ಬಕ್ತಿಯಿಲ್ಲದವರ ತಲೆಯ ಮೇಲೆ ನನ್ನ ಎಡಗಾಲು ಇರಲಿ ಪದಮದಕ್ಷಿಣಂ ಲಕ್ಷ್ಮತಾಂ" ಎಂದು ಅವರ ವಿಚಾರವಾಗಿ ತಿರಸ್ಕಾರ ಮತ್ತು ಅಸಮಾದಾನವನ್ನು ವ್ಯಕ್ತಪಡಿಸಿರುತ್ತಾರೆ

ಒಂದುಕಡೆ ತಮ್ಮ ಅಮೋಘಪಾಂಡಿತ್ಯದ ವಿಚಾರವಾಗಿ ಅಭಿಮಾನವಿದ್ದರೂ, ಭಗವದ್ಭಾಗವತೋತ್ತಮರ ವಿಚಾರದಲ್ಲಿ ಅವರಿಗಿದ್ದ ಭಕ್ತಿ ವಿಶೇಷವು ಅನ್ಯಾದೃಶವಾಗಿದೆ

ತರ್ಕೇಷು ಕರ್ಕಶ ದಿಯೋ
ವಯಮೇವನಾನ್ಯೇ,
ಕಾವ್ಯೇಷು ಕೋಮಲದಿಯೋ
ವಯಮೇವನಾನ್ಯೇ

ಎಂಬುದರಿಂದಲೂ,

"ವಯಂತು ಹರಿದಾಸಾನಾಂ
ಪಾದರಕ್ಷಾವಲಂಬಿನ "

ಬ ವಚನಗಳಿಂದಲೂ ಇದು ಸ್ಪಷ್ಟವಾಗು ದರಿಂದ ತಾವು ಭಾಗವತೋತ್ತಮರ ದಾಸಾ ಸನೆಂಬುದನ್ನು ಪ್ರಕಟಿಸಿರುತ್ತಾರೆ

ಾದವಾಭ್ಯುದಯ" ಕಾವ್ಯವು ಆಚಾರ್ಯರ ಕೃತಿಗಳಲ್ಲಿ ಒಂದಾದ ಅನ್ಯಾದೃಶ್ಯವಾದ ತ್ರ ಕವಿ ಕುಲಗುರುವೆನಿಸಿದ ಕಾಳಿದಾಸಾದಿ ವಿಗಳಿಗೆ ಸಮವಾಗಿ ಇವರು ಈ ಕಾವ್ಯದಲ್ಲಿ ಪರಮಾತ್ಮನ ಅವತಾರ, ಬಾಲ್ಯವಿನೋದ, ಮರ್ದನ, ರಾಸಕ್ರೀಡೆ ಮೊದಲಾದ ಸನ್ನಿವೇ ನ್ನ ಬಹಳ ಹೃದಯಂಗಮವಾಗಿ ವರ್ಣಿಸಿರು ಸರ್ವಜ್ಞ ಸದೃಶರಾದ ಸುಪ್ರಸಿದ್ಧ ವಿದ್ವಾಂ ಅದ್ವೈತವೇದಾಂತದಲ್ಲಿ ಸುನಿಷ್ಣಾತರೂ ಆದ ್ಯದೀಕ್ಷಿತರಂತಹವರು ಈ ಗ್ರಂಥಕ್ಕೆ ಅತಿಸುಂ ದ ವ್ಯಾಖ್ಯಾನವನ್ನು ರಚಿಸಿ ವೇಂಕಟನಾಥರ ವಾದ ಭಾವಗಳನ್ನು ತಿಳಿಸುವುದು ಅಸಾ ು ತಿಳಿಸಿರುವುದನ್ನು ಸರ್ವರೂ ಅತಿಮುಖ್ಯ ಮನಿಸಬೇಕಾದುದು

ತ್ಥಂ ವಿಚಿಂತ್ಯಾ ಸರ್ವತ್ರ ಬಾವಾ<br>
ತಿಪದೇಪದೇ ಕವಿತಾರ್ಕಿಕ ಸಿಂಹಸ್ಯ<br>
ನ್ಯೇಷು ಲಲಿತೇಷ್ವಪಿ"

ಮ ಅವರು ಉದ್ಗರಿಸಿರುತ್ತಾರೆ ವೈರಾಗ್ಯ ದಲ್ಲಿ ಇವರು ವಿರಕ್ತಚಕ್ರವರ್ತಿ -- ಎಂದು ಹುದು ತಮ್ಮ ವೈರಾಗ್ಯ ಪಂಚಕದಲ್ಲಿ ಹೀಗೆ ಂಡಿರುವುದನ್ನು ಗಮನಿಸಬೇಕು

ವಂ ಸೇವಿತು ಮೇವ<br>
ನುಮಹೇ ಯೋಽಸೌದಯಾಳು<br>
ಾದಾನಾಮುಷ್ಟಿಮುಚೇ<br>
ಚೇಲ ಮುನಯೇ ದತ್ತೇ ಸ್ವವಿತ್ತೇಶತಾಂ"

ಾನ್ಯಮನುಷ್ಯನನ್ನು ಹೊಗಳಿ ನಮ್ಮ ಸಾಮ ್ನ ನಾಶಪಡಿಸಿಕೊಳ್ಳಬಾರದು ಹೊಗಳಿ ಮಾತ್ಮನನ್ನು ಮಾತ್ರ ಹೊಗಳಿ ನಮ್ಮ ನಾಲಿ ಸಾರ್ಥಕ ಪಡಿಸಿಕೊಳ್ಳಬೇಕು ಎಂದು ರೆ ಮತ್ತು ಅದೇ ಕೃತಿಯ ಕೊನೆಯಲ್ಲಿ--

ಸ್ತಿಪಿತ್ರಾರ್ಜಿತಂ ಕಿಂಚಿತ್ ನ<br>
ಯಾ ಕಿಂಚಿದಾರ್ಜಿತಂ<br>
ಮೇ ಹಸ್ತಿ ಶೈಲಾಗ್ರೇ<br>
ಪೈತಾಮಹಂ ಧನಂ"

ು ಹೇಳಿಕೊಂಡು, ಪ್ರಪಂಚದಲ್ಲಿ ನನಗಿ ಕಮಾತ್ರ ಅಮೂಲ್ಯಸ್ವತ್ತೆಂದರೆ, ಅದು ನನ್ನ ಪಿತಾಮಹರು ಇಟ್ಟಿರುವ ವರದರಾಜಸ್ವಾಮಿ - ಒಬ್ಬರೇ, ಎಂದು ಹೇಳಿ ವರದರಾಜರಲ್ಲಿ ತಮ ಗಿದ್ದ ಭಕ್ತಿಶ್ರದ್ಧೆಯನ್ನು ಹೀಗ ಸ್ಪಷ್ಟಪಡಿಸಿರುತ್ತಾರೆ ಪಿತಾಮಹ ಎಂದರೆ ಚತುರ್ಮುಖನೆಂದೂ ಅರ್ಥವಾಗುತ್ತವೆ "ಸತ್ಯಂಶಪೇ ವಾರಣಶೈಲ ನಾಥ! ವೈಕುಂಠವಾಸ ಽಪಿ ನಮೇ ಽಭಿಲಾಷ" ಎಂದು ಪ್ರಾರ್ಥಿಸಿ, ನಿನ್ನ ದರ್ಶನಪೂಂದಿವರ ಅದೇ ಸಾಕು ವೈಕುಂಠವಾಸವಲ್ಲಿಯೂ ನನಗ ಅಪೇಕ್ಷ ಇಲ್ಲ - ಎಂದು ಪ್ರಕಟಿಸಿರುತ್ತಾರ "ಪರಸರ ಹಿತೈಷಿಣಾಂ ಪರಿಸರೇಷು ಮಾಂಭೂನ್ಮಮ" ಎಂದು ಪ್ರಾರ್ಥಿಸುತ್ತಾ ದ್ವೇಷಾಸೂಯ ಇಲ್ಲದ, ಪರಸ್ಪರ ಸದ್ಭಾವನೆಯುಳ್ಳ ಮಹನೀಯರ ಸಹವಾಸವನ್ನು ಅನುಗ್ರಹಿಸು ಎಂದೂ, "ಹರಿನೀಲ ಶಿಲಾವಿಭಂಗ ನೀಲಾ ಪ್ರತಿಭಾ ಸಂತು ಮಮಾಂತಿಮ ಪ್ರಯಾಣ" ಎಂದು ಗೂ ಪಾಲದಿಂಶತಿಯಲ್ಲಿ ವಿಜ್ಞಾಪಿಸುತ್ತಾ ತಮ್ಮ ಕೂನೆಯ ಸಮಯದಲ್ಲಿ ಭಗ ವಂತನ ಸ್ಮರಣ ಇರಲಿ ಎಂದು ಪ್ರಾರ್ಥಿಸಿಕೊಂಡಿ ರುತ್ತಾರೆ ಇವರ ಹಂಸ ಸಂದೇಶವು ಅನುಪಮ ವಾದ ಸಂದೇಶಕಾವ್ಯ ಇವರ ಸ್ತೋತ್ರಗಳ ವಿಚಾ ರವನ್ನಂತೂ ಹೇಳಬೇಕಾದುದೇ ಇಲ್ಲ ಹೇಳಲು ಸಾಧ್ಯವೂ ಇಲ್ಲ

ಮೇಲೆ ತಿಳಿಸಿರುವ ಕೆಲವು ಸಂದೇಶಗಳು ಪ್ರತಿದಿ ನವೂ ಅನುಸಂದಾನ ಮಾಡಲು ಬಹಳ ಯೋಗ್ಯ ವಾಗಿವೆ

ಶ್ರೀಮದಾಚಾರ್ಯರಿಗೆ ಯಾದವಗಿರಿಯ ವಿಚಾ ರವಾಗಿ ಅತ್ಯಂತ ಗೌರವ ಅದನ್ನು ತಮ್ಮ "ಸಂಕ ಲ್ಪಸೂರ್ಯೋದಯ"ದಲ್ಲಿ ಬಹಳ ಹೃದಯಂಗಮ ವಾಗಿ ಸ್ಪಷ್ಟಪಡಿಸಿರುತ್ತಾರ ಕೆಲವು ವರ್ಷಗಳ ಕಾಲ ಅಲ್ಲಿ ವಾಸವಾಗಿದ್ದು ಅಲ್ಲಿದ್ದ ವಿದ್ವದ್ವರೇಣ್ಯರನ್ನು ಬಹಳವಾಗಿ ಶ್ಲಾಘಿಸಿರುತ್ತಾರೆ

"ಅಯಂಪುನ<br>
ಅಮುಷ್ಯಾ ಪರಿಸರೇ ಪುರುಹೂತ<br>
ಪುರೋಹಿತಾಭ್ಯದಿಕ ಬುದ್ಧಿಭಿ<br>
ಪುರಾಣಪುರುಷ ಚರಣಾರವಿಂದ<br>
ಮದುಕರಾಯಮಾಣಮಾನಸೈ

ಮನೀಷಿಭಿಶ್ಚ ಅದಿಷ್ಠಿತೋ<br>
ಯದುಕುಲ ಸಾರ್ವಭೌಮಸ್ಯ ಪರಿಗ್ರಹಾತ್<br>
ಪ್ರಖ್ಯಾತ ಗುಣ ಸಮಾಖ್ಯ<br>
ಯಾದವಾಚಲೋನಾಮ ಪರ್ವತೋತ್ತಮ<br>
ಅಪಿ ಚ ಬಾದರಾಯಣಾದಿಭಿ ಅಭ್ಯರ್ಚಿತೇ<br>
ದಕ್ಷಿಣ ಬದರಿಕಾಶ್ರಮೇ ನಾರಾಯಣಗಿರಿಔ

"ಲಕ್ಷ್ಮೀ ಕೌಸ್ತುಭ ಲಕ್ಷಣೇನ<br>
ಪಪ್ರಚ್ಛಾ ವಾಚಂತಿ ನನ<br>
ಸ್ವಯಂ ಶ್ರೀ ತ ದ್ವೀಪ ನಿವಾಸಿನಾಂ<br>
ಇವ ದಿರ್ಘ ಸಂತೋಷ ಮಂತರ್ಮುಖಿಂ<br>
ವಿದ್ಯಾವೀಚಿ ಸಹಸ್ರ ಸಂಪ್ಲವ<br>
ಮಿಳದ್ಭಗ್ನಾರ್ಗಾಡಂ ಬರ ಸ್ವಾನ<br>
ಸಂಯಮಿ ಸಾರ್ವಭೌಮ<br>
ವಿಜಯಸ್ವಾನ ವಿದತ್ತೇ ಹರಿ

ಈ ಮಹನೀಯರು ಅತ್ಯುತ್ಕೃಷ್ಟವಾದ ಅನೇಕ ಗ್ರಂಥಗಳನ್ನು ರಚಿಸಿ, ವೇದಾಂತಿಗಳಿಗೂ, ತಾರ್ಕಿಕ ರಿಗೂ, ಸಾಹಿತಿಗಳಿಗೂ, ಸಾಮಾನ್ಯ ಜನರಿಗೂ ಪರ ಮೋಪಕಾರಮಾಡಿ ಸರ್ವರಕೃತಜ್ಞತಗೂ ಪಾತ್ರರಾ ಗಿರುತ್ತಾರೆ

"ಶತಾಯುರ್ವೈ ಪುರುಷ ಶತವಿ ರ್ಯ"ಎಂಬ ಶ್ರುತಿವಚನದಂತೆ, ಪೂರ್ಣವಾಗಿ ಪುರುಷಾಯುಷ್ಯ ವನ್ನು ಸಾರ್ಥಕಪಡಿಸಿ, ಕೃತಾರ್ಥರಾದ ಮಹಾಪುರು ಷರು -- ಶ್ರೀ ವೇಂಕಟನಾಥರು ಇವರ ಜೀವ ನದ ಒಂದೊಂದು ಅಂಶವನ್ನು ತೆಗದುಕೊಂಡರೂ ಬೃಹತ್ತಾದ ಒಂದೊಂದು ಗ್ರಂಥವನ್ನೇ ಬರೆಯಬ ಹುದು "ಯದಿ ಶೇಷೋ ಭವೇದ್ವಕ್ತಾ ಕವಿತಾ ನ್ಯು ರ್ಗುಣಾಸ್ತವ" ಎಂಬಂತೆ ಆದಿಶೇಷನಂತೆ ಸಾವಿರ ನಾಲಿಗೆ ಇದ್ದಿದ್ದರೆ ಸ್ವಲ್ಪತಿಳಿಸಬಹುದಾಗಿತ್ತು ಸಾಮ ರ್ಥ್ಯವಿಲ್ಲದೇ ಇರುವುದರಿಂದ ಇಲ್ಲಿಗೆ ಉಪಸಂಹಾರ ಮಾಡಬೇಕಾಗಿದೆ

ತಮ್ಮ ಅಮೂಲ್ಯವಾದ ಪ್ರಾಣರಕ್ಷಣೆಯನ್ನು ನಿರ್ಲಕ್ಷಿಸಿ, ಯವನರ ಉಪದ್ರವದಿದ ನಾಶವಾ ಗುವಂತಿದ್ದ ನಮ್ಮ ಸಿದ್ಧಾಂತವನ್ನು ಸಂರಕ್ಷಿಸಿ, ಉಪ ಕಾರಮಾಡಿದ ಶ್ರೀಮದ್ವೇದಾಂತಾಚಾರ್ಯರ ಮತ್ತು ಶ್ರೀಮತ್ ಪಿಳ್ಳೆ ಲೋಕಾಚಾರ್ಯರ ಅಮೋಘ ವಾದ ಉಪಕಾರವನ್ನು ಶ್ರೀವೈಷ್ಣವ ಸಾಮಾನ್ಯರು ಸರ್ವದಾ ಸ್ಮರಿಸುತ್ತಾ ಈ ಆಚಾರ್ಯದ್ವಯರಿಗೆ ಚಿರ ಋಣಿಗಳಾಗಿರಬೇಕು

"ಶ್ರೀಮಾನ್ವೇಂಕಟನಾಥಾರ್ಯ<br>
ಚಿರಂ ವಿಜಯತಾಂಭುವಿ"

--ಎಂದು ತಿಳಿಸಿ ಇಷ್ಟಕ್ಕೇ ಮುಗಿಸುತ್ತೇನೆ



# ಪುರುಷ ಸೂಕ್ತ ಪರಿಚಯ

ಸೂಕ್ತ ರಾಶಿಗಳಲ್ಲಿ ಪುರುಷಸೂಕ್ತವು ಮಹತ್ತು ಹಾಗೂ ಬೃಹತ್ತು ಪಡೆದುಕೊಂಡಿದೆ ಪುರುಷ ಸೂಕ್ತದ ವಿಷಯವು ಋಗ್ವೇದ ಯಜುರ್ವೇದ ಸಾಮವೇದ 'ಅದರ್ವವೇದ, ಸಂಹಿತೆ, ಆರಣ್ಯಕ, ಬ್ರಾಹ್ಮಣ, ಶ್ರೌತಸೂತ್ರ ಸಾಂಖ್ಯಾಯನ ಸೂತ್ರ' ಕಾತ್ಯಾಯನ ಸೂತ್ರ, ಉಪನಿಷತ್ ಶ್ವೇತಾಶ್ವರ, ಮಾಂಡಕ್ಯ ಸೂತ್ರ ಮತ್ಸ್ಯ ಬ್ರಹ್ಮ ಬಾಗವತ ಪುರಾಣಾದಿಗಳಲ್ಲಿ ಅಲ್ಲದೇ ಶ್ರೀಮದ್ ಬಗವದ್ಗೀತೆಯ ಹನ್ನೊಂದನೆಯ ಅಧ್ಯಾಯದಲ್ಲಿ ಇವರಂತಿರುವ ವರ್ಣನೆಯು ಬಂದಿರುತ್ತದೆ

## ಪುರುಷ ಸೂಕ್ತ ಸಂಖ್ಯೆ

| | |
|---|---|
| ಋಗ್ವೇದೀಯ ಪುರುಷಸೂಕ್ತ | 16 ಋಚಾಗಳು |
| ವಾಜಸನೇ ಯಜುರ್ವೇದ ಕಾತ್ಯಾಯನ | 22 ಋಚಾಗಳು |
| ಸಾಮವೇದಿಯ | 7 ಋಚಾಗಳು |
| ಅದರ್ವವೇದೀಯ | 16 ಋಚಾಗಳು |
| ತೈತ್ತರೀಯ ಆರಣ್ಯಕ ಕೃಷ್ಣಯಜುರ್ವೇದಿ | 18 ಋಚಾಗಳು |

ಪುರುಷಸೂಕ್ತದಲ್ಲಿ ಉತ್ತಮೋತ್ತಮ ಅನೇಕ ಅಂಶಗಳಿವೆ ಪುರಿ + ವಸ್ = ಪುರುಷ, ಸು + ಉಕ್ತ = ಸೂಕ್ತ ಸೃಷ್ಟಿರೂಪಿ ಪುರಿಯಲ್ಲಿ ವಾಸಿಸುವವನು ಪುರುಷನಾಗಿರುವನು ಸು + ಉಕ್ತ ಎಂಬಂತೆ ಉತ್ತಮ ಮಾತು ಆಗಿದೆ ಸೃಷ್ಟಿ ಎಂದರೆ ಆಂಗ್ಲದ Nature ನಿಸರ್ಗ ಎಂಬ ಸಂಕುಚಿತ ಅರ್ದವಾಗಿರದೆ ಅಖಿಲ ವಿಶ್ವದ ಅರ್ದವಾಗಿದೆ ಪುರುಷಸೂಕ್ತವು ಮೂರು ವರ್ಗಗಳನ್ನು ಹೊಂದಿದ್ದು, ಪ್ರಣವದ ಮೂರು ಅಕ್ಷರಗಳ ವ್ಯಾಹೃತಿ ತ್ರಯಗಳ ಹಾಗೂ ಗಾಯತ್ರಿದೇವಿಯ ಮೂರು ಪಾದಗಳ ವ್ಯಾಖ್ಯಾನವೆಂದು ಶಾಸ್ತ್ರಕಾರರ ಅಬಿಪ್ರಾಯವಾಗಿದೆ

ಸಹಸ್ರ ಶೀರ್ಷ ಎಂದರೆ ಸಾವಿರ ತಲೆಗಳು ಎಂದಿರದೆ ಲಕ್ಷಣಾರ್ದದಿಂದ ಸಾವಿರಾರು - ಅನಂತ ಎಂಬುದು ಪುರುಷಸೂಕ್ತದ ಅರ್ದ ಮನನದಿಂದ ತಿಳಿಯಬೇಕಾಗುತ್ತದೆ

## ಬ್ರಹ್ಮಾಂಡೀಯ ಪುರುಷನ ಸ್ವರೂಪ

ವಿಶ್ವವು ಬ್ರಹ್ಮಾಂಡ ಪುರುಷನ ಒಂದು ಭಾಗವಾಗಿದೆ ಅಂದ ವಿರಾಟಪುರುಷನ ಮುಂದೆ ಒಂದು ಪಾದವಾಗಿದೆ ಸರ್ವೋತ್ತಮನಾದ ವಿರಾಟ ಪುರುಷನ ಹಿರಿಮೆ -- ಗರಿಮೆಯು ಅನಂತವಾಗಿದೆ ಅದನ್ನು ಎಣಿಸಲು ಅಸಾಧ್ಯ, ವಿರಾಟ ಪುರುಷನ ಮೂರು ರೂಪಗಳು ಅಮೃತವಾಗಿದ್ದು (ನಾಶವಿರದೆ ಇರುವಂಥವುಗಳು) ಸ್ವರ್ಗಲೋಕದಲ್ಲಿವೆ ವಿರಾಟಪುರುಷನು ಸರ್ವ ವ್ಯಾಪ್ತಿಯನ್ನು ಹೊಂದಿದ್ದು ಸರ್ವೋತ್ತಮನಾಗಿರುವನು ಪೃಥ್ವಿ ರೂಪ ಬಾಗದ ಮೇಲೆ ಉತ್ಪತ್ತಿ ಸ್ಥಿತಿ ಲಯ ಆಗುವಂತೆ ತಾರಾ ವಿಶ್ವದಲ್ಲಿಯೂ ಇವು ನಿರಂತರವಾಗಿ ಅನಂತಕಾಲದಿಂದ ನಡೆದು ಬಂದಿರುತ್ತವೆ ಈ ಬ್ರಹ್ಮಾಂಡದ ಅದಿಪತಿ ಯಾದ ಪರಮಾತ್ಮನಿಂದ ಬ್ರಹ್ಮಾಂಡವು ಹುಟ್ಟಿತು

ಈ ಬ್ರಹ್ಮಾಂಡ ಪುರುಷನ ಬಯಕೆಯಂತೆ ಪುರುಷ ಹಾಗೂ ಪ್ರಕೃತಿಯರು ಎರಡು ಘಟಕಗಳು ಎರಡು ರೂಪಗಳು ಉತ್ಪನ್ನರಾದರು ಪ್ರಕೃತಿ ಎಂದರೆ ವಿವಿದ ಪ್ರಕಾರಗಳ ಕೃತಿಗಳನ್ನು ಮಾಡುವ ಶಕ್ತಿ ಅವಳನ್ನೇ ಮಾಯಾ ಎನ್ನಲಾಗಿದೆ ಮಾ ಎಂದರೆ ಇಲ್ಲ ಅದವಾ ನಾಸ್ತಿತ್ವ ಯಾ ಎಂದರೆ ಭಾಸಮಾನ ಅರ್ದ ಪುರುಷಸೂಕ್ತದ ಆರನೆಯ ಮಂತ್ರದಲ್ಲಿ ಸೃಷ್ಟಿಗೋಲದ ಒಂದು ಬಾಗವಾದ ಋತುಚಕ್ರದೊಳಗಿನ ವಸಂತ ಗ್ರೀಷ್ಮ ಶರತ್‌ಗಳಿಗೆ ಸುಂದರ ಹೋಲಿಕೆಯ ವರ್ಣನೆ ಕಂಡುಬರುತ್ತದೆ

ಮುಖಂ ಕಿಮಸ್ಯ ? ಕಾ ಬಾಹು ? ಕಾ ಊರು ಪಾದಾ ಉಚ್ಯೇತೆ -- ಈ ವಿಶ್ವರುಪುಷನ ಕುರಿತು ಪ್ರಶ್ನೆಗೆ ೧೨ - ೧೩ -- ೧೪ ನೆಯ ಮಂತ್ರಗಳಲ್ಲಿ ಬ್ರಾಹ್ಮಣೋಽಸ್ಯ ಮುಖಮಾಸೀತ ದಿಂದ ಪದ್ಭ್ಯಾಂ ಬೂಮಿರ್ ದಿಶ ಶ್ರೋತಾತ್ ತದಾ ಲೋಕಾಂ ಅಕಲ್ಪಯನ್ ಎಂಬ ತನಕ ಆಗಿದೆ ವಿಶ್ವರುಪುಷನ ದೇಹವು ದ್ಯುಲೋಕದಿಂದ ಪೃಥ್ವಿ ಲೋಕಕ್ಕೆ ಪಸರಿಸಿದೆ ಮತ್ತು ಇವನು ವಿಶ್ವದ ಸಂಚಲನವನ್ನು ಮಾಡುತ್ತಿದ್ದು ವಿಶ್ವಪುರುಷನಾಗಿ ಸಂಪೂರ್ಣ ಬ್ರಹ್ಮಾಂಡದಲ್ಲಿ ವ್ಯಾಪಿಸಿರುವನು ಸಹಸ್ರಶೀರ್ಷ ಸಮಷ್ಟಿ ಪುರುಷನಾದ ಇವನನ್ನು ರಾಷ್ಟ್ರ ಪುರುಷನೆಂದು ಕರೆಯಲಾಗಿದೆ ಬ್ರಾಹ್ಮಣೋಸ್ಯ ಮುಖ ಮಾಸೀತ ಇದರಲ್ಲಿ ಮಾನವ ಸಮಾಜ ರೂಪಿ ಸಮಷ್ಟಿ ಪುರುಷನ ಎಂದರೆ ರಾಷ್ಟ್ರಪುರುಷನ ವರ್ಣನೆ ಇರುತ್ತದೆ

*ಅನಂತ ಚಿಂತಾಮಣಿ ಜೋತಿಷೀ.*

ಚಂದ್ರಮಾ ಮನಸೋ ಜಾತ ಈ ಮಂತ್ರ[illegible] ಚಂದ್ರನು ಮನ ಕಾರಕನಾಗಿದ್ದು [illegible] ವನು ಸೂರ್ಯನು ಕಣ್ಣಾಗಿ [illegible] ವನು ಅಗ್ನಿಯು ವಾಣ ರೂಪದಲ್ಲಿ [illegible] ದಲ್ಲಿ ವಾಸಿಸಿರುವನು ಈ ಅಗ್ನಿಯು [illegible] ಸಂಚರಿಸಿ ಜಾಗೃತನಾಗಿರುವನು ವಾಯು ಪ್ರಾಣನಾಗಿ ಮೂಗಿನಲ್ಲಿ ತಿರುಗಾಡುವನು ದಿಶಯು ಕಿವಿ ಆಗಿ ಶ್ರವಣೇಂದ್ರಿಯದಲ್ಲಿರುವನು

ಬ್ರಹ್ಮರುದ್ರಾದಿಗಳು ತಮನ್ನಲ್ಲವನ್ನು ಪಶುವೆಂದು ತಿಳಿದುಕೊಂಡು (ಪಶ್ಯತಿ ಇತಿ ಪಶು ನೋಡುವವರು) ಮಾನಸ ಯಜ್ಞದಿಂದ ವಿರಾಟ ಪುರುಷನನ್ನು ಆರಾದಿಸಿದರು ಸ್ಥೂಲಶರೀರ ಪ್ರಾಣರೂಪ ಶರೀರ, ಬಹಿರ್ಮಾನ ಶರೀರ, ಅಂತರ್ಮಾನ ಶರೀರ, ಬುದ್ಧಿ, ಪರಾಬುದ್ಧಿ, ಜೀವ - ಈ ಏಳು ಆ ಪಶುವಿನ (ನೋಡುವವರ) ಮರ್ಯಾದೆಯಾಗಿದೆ ಮಾನಸ ಯಜ್ಞಕ್ಕೆ ಏಳು ಸುತ್ತುಗಳು ಇಪ್ಪತ್ತೊಂದು ಸಮಿದಗಳಿದ್ದವು. ಸಪ್ತದಾತುಗಳು ಏಳು ಸುತ್ತುಗಳಾಗಿವೆ ಆದಿದೈವಿಕವಾಗಿ ಗಾಯತ್ರಿ ಮೊದಲಾದ ಸಪ್ತ ಛಂದಸ್ಸುಗಳೇ ಏಳು ಸುತ್ತುಗಳೆಂದು ಪರಿಗಣಿಸಲ್ಪಟ್ಟಿದೆ ೨೧ ಸಮಿದೆಗಳು ಆದಿದೈವಿಕ ಅನುಸಂದಾನದಲ್ಲಿ ದ್ವಾದಶ ಮಾಸಗಳು ಪಂಚ ಋತುಗಳು ತ್ರಿಲೋಕ ಹಾಗೂ ಸೂರ್ಯ - ಹೀಗೆ ಇಪ್ಪತ್ತೊಂದು ಸಮಿದೆಗಳು

೨೧ ಸಮಿದೆಗಳೆಂದರೆ ಎರಡು ಕಣ್ಣುಗಳು, ಮೂಗಿನ ಎರಡು ಹೊರಳೆಗಳು, ಎರಡು ಕಿವಿಗಳು, ೧ ವಾಕ್, ಈ ಜ್ಞಾನೇಂದ್ರಿಯಗಳು ಏಳು ಎರಡು ಕೈಗಳು, ಎರಡು ಕಾಲುಗಳು, ಒಂದು ಮುಖ, ಒಂದು ಮೂತ್ರದ್ವಾರ ಮತ್ತು ಒಂದು ಗುದದ್ವಾರ ಎಂಬ ಏಳು ಕರ್ಮೇಂದ್ರಿಯ, ಪಂಚ ಪ್ರಾಣ -- ಚೈತನ್ಯ ಅಹಂಕಾರ ಇವು ಏಳು - (2+2+2+1=7, 2+2+1+1+1=7, 5+1+1=7, 7+7+7=21) ಇವು ೨೧ ಸಮಿಧೆಗಳು ಇವುಗಳ ಮೂಲಕ ಯಜ್ಞಮಾಡುವವನಿಗೆ ಉತ್ತಮ ಸಿದ್ಧಿಯು ಪ್ರಾಪ್ತವಾಗುತ್ತದೆ.



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು ತಿರುಪತಿ ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

## ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5 00 ಪ್ರಾ 5 30 | ಪ್ರಾ 5 00 ಪ್ರಾ 5 30 |
| ವಿಶ್ವರೂಪ ಸರ್ವದರ್ಶನ | ಪ್ರಾ 5 30 ಪ್ರಾ 6 00 | ಪ್ರಾ 5 30 ಪ್ರಾ 6 00 |
| ತೋಮಾಲ, ಕೊಲುವು | | |
| ಪಂಚಾಂಗಶ್ರವಣ | ಪ್ರಾ 6 00 ಪ್ರಾ 6 30 | ಪ್ರಾ 6 00 ಪ್ರಾ 6 30 |
| ಸಹಸ್ರನಾಮಾರ್ಚನೆ | ಪ್ರಾ 6 30 ಪ್ರಾ 7 00 | ಪ್ರಾ 6 30 ಪ್ರಾ 7 00 |
| ಮೊದಲನೇ ಗಂಟೆ | ಪ್ರಾ 7 00 ಪ್ರಾ 7 30 | ಪ್ರಾ 7 00 ಪ್ರಾ 7 30 |
| ಸರ್ವದರ್ಶನ | ಪ್ರಾ 7--30 ಪ್ರಾ 10 00 | *ಅಭಿಷೇಕ ಪ್ರಾ 7 30 ಪ್ರಾ 8 30 |
| | | ಸಮರ್ಪಣ ಪ್ರಾ 8 30 ಪ್ರಾ 9 30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10 00 ಪ್ರಾ 10--30 | ಪ್ರಾ 9 30 ಪ್ರಾ 10 30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10 30 ಮ 12 00 |
| ಸರ್ವದರ್ಶನ | ಪ್ರಾ 10 30 ಸಂ 6 30 | ಪ್ರಾ 10 30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6 30 ರಾ 7 00 | ಸಂ 6 30 ರಾ 7--00 |
| ಸರ್ವದರ್ಶನ | ರಾ 7 00 ರಾ 8 45 | ರಾ 7 00 ಪ್ರಾ 8 45 |
| ಏಕಾಂತ ಸೇವೆ | ರಾ 8- 45 ರಾ 9 00 | ರಾ 8 45 ರಾ 9 00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ 200 00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ 100 00 |
| ಅರ್ಚನೆ (ಒಂದು ವರ್ಷ) | ರೂ 42 00 |
| ಶಾಶ್ವತ ನಿತ್ಯಾರ್ಚನೆ | ರೂ 542 00 |

ದೇವಪೂಜೆ ಸಂಗತೀಕರೂ ದಾನ ಯಜ್ಞದ ತ್ರಿವಿದ ಸ್ವರೂಪ ಜ್ಞಾನಿ ಪುರುಷಾರ್ದ ಮತ್ತು ವ್ಯವಹಾರ ದಕ್ಷತೆ ಸತ್ಕಾರ ದೇವಪೂಜೆ ರಾಷ್ಟ್ರ ನಿವಾಸಿಗರ ಸಂಘಟನೆ, ರಾಷ್ಟ್ರ ಶಕ್ತಿ ಹೆಚ್ಚಳ, ಜ್ಞಾನಬಲ ದನ ಕಾರ್ಯಶಕ್ತಿಗಳಿಗೆ ಸಹಕರಿಸುವನು ಇಂದ ವ್ಯಾಪಕ ದೃಷ್ಟಿಯ ಪುರುಷಸೂಕ್ತವು ವಿಷ್ಣುವಿಗೆ ಪ್ರಮುಖವಾಗಿದ್ದು ಪಂಚಾಯತ ಪೂಜೆಯಲ್ಲಿ ಇತರ ದೇವತೆಗಳ ಪೂಜೆಯಲ್ಲಿ ಬಳಸುವರು

ಜ್ಞಾನಾನಂದ ಮಯ ಸ್ವರೂಪದ ಅವಯವಗಳನ್ನು ವರ್ಣಿಸುವ ಪುರುಷಸೂಕ್ತಕ್ಕೆ ಅಂತರ್ಯಾಮಿ ನಾರಾಯಣನು ಋಷಿಯಾಗಿದ್ದು ಪುರುಷ ಹೆಸರಿನ ನಾರಾಯಣ ದೇವತೆಯು ಸೃಷ್ಟಿಯ ಪೂರ್ವದಲ್ಲಿ ಬ್ರಹ್ಮದೇವನು ನೂರು ವರ್ಷಗಳ ತನಕ ತಪೋವ್ರತಗೊಂಡು ಪರಮೋಚ್ಚವಾದ ಜ್ಞಾನಾಮೃತವನ್ನು ಪಡೆಯುವಲ್ಲಿ ಬಗವತ್ ಕೃಪೆಯೇ ಸಾದನವಾಯಿತು ಬಗವಂತನನ್ನು ಆರಾದಿಸಿ ಅವನ ಶ್ರೇಷ್ಠ ಜ್ಯೇಷ್ಠತೆಯನ್ನು ಅರಿತುಕೊಂಡವನು ತನ್ನ ಬಾಳಿನಲ್ಲಿ ಬಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬಲ್ಲ ಈ ಸಾಕ್ಷಾತ್ಕಾರಕ್ಕಾಗಿ ಪುರುಷಸೂಕ್ತವೆಂಬ ಜ್ಞಾನ ಕಾರಣವಾಗಿದ ಮೋಕ್ಷಕ್ಕೆ ಇದರ ಹೊರತು ಬೇರೆ ದಾರಿಯೇ ಇರುವುದಿಲ್ಲ ನಾನ್ಯಪಂದಾ ಅಯನಾಯ ವಿದ್ಯತೇ -- ಎಂದಿದೆ

ಪುರುಷ ಸೂಕ್ತವನ್ನು ೧೬ ಬಾರಿ ಪಠಿಸಿದಾಗ ಪುರುಷಸೂಕ್ತ ಷೋಡಶಿನಿಯಾಗುತ್ತದೆ ಈ ೧೬ ಆವರ್ತನದಿಂದ ಮಾನವನು ಸತ್ಫಲವನ್ನು ಪಡೆಯುವನು ಪುರುಷಸೂಕ್ತದ ಹೋಮವು ಸಂತಾನಪ್ರಾಪ್ತಿಯ ಸಾದನವಾಗಿದೆ ಅಲ್ಲದೆ ಪ್ರತಿಯೊಂದು ಮಂತ್ರದಲ್ಲಿಯೂ ಒಂದೊಂದು ವಿಶೇಷಾರ್ದವಿದ್ದು ಅದರಲ್ಲಡಗಿರುವ ಜ್ಞಾನಾಮೃತವನ್ನು ಜನತೆಗೆ ನೀಡುವಲ್ಲಿ ಜ್ಞಾನಿಗಳು ಮುಂದಾಗಬೇಕು



(ಆದಾರ)



# ಮಹಾಮಹಿಮ ಮಹಿಪತಿದಾಸರು

ಕರ್ನಾಟಕದ ಖ್ಯಾತ ದಾಸವರೇಣ್ಯರಾದ ಮಹಿಪತಿದಾಸರ ಆರಾಧನೆ ಕಾರ್ತೀಕ ವದ್ಯ ಅಮಾವಾಸ್ಯೆ ದಿವಸ ಅವರ ಯೋಗ ಭೂಮಿಯಾದ ಕಾಖಂಡಕಿಯಲ್ಲಿ ವಿಜೃಂಭಣೆಯಿಂದ ಆಚರಿಸಲ್ಪಡುತ್ತದೆ ಶ್ರೀಗುರು ಮಹಿಪತಿರಾಯರ ಪದಪದ್ಯಾದಿಗಳು ಕನ್ನಡಿಗರಿಗೆಲ್ಲ ಚಿರಪರಿಚಿತ "ಎನ್ನ ಪಾಲಿಸೋ ಕರುಣಾಕರಾ", "ಕಾಯೋ ಕರುಣಾನಿದೇ" ಮುಂತಾದ ಹಾಡುಗಳನ್ನು ಶ್ರೀ ಪಂಡಿತ ಭೀಮಸೇನ ಜೋಶಿ ಅವರ ಸುಮದುರ ಕಂಠದಿಂದ ಕೇಳುವುದೊಂದು ಸೊಗಸು ಕರ್ನಾಟಕದ ದಾಸಸಾಹಿತ್ಯಕ್ಕೆ ವಿಜಾಪೂರ ಜಿಲ್ಲೆಯ ಶ್ರೇಷ್ಠ ಕೊಡುಗೆ ಮಹಿಪತಿದಾಸರು ಸರಿಯಾಗಿ ೩೦೦ ವರ್ಷಗಳ ಹಿಂದೆ ಆದಿಲಶಾಹಿಯ ಮಂತ್ರಿಯಾಗಿ, ಜ್ಞಾನೋದಯದ ನಂತರ ಸಂಪತ್ತನ್ನು ತ್ಯಾಗಮಾಡಿ, ದಾಸರಾಗಿ ದಾಸಸಾಹಿತ್ಯವನ್ನು ಬೆಳೆಸಿದ ಕೀರ್ತಿ ಮಹಿಪತಿದಾಸರದು ಅನೇಕ ಭಾಷಾವಿಶಾರದರಾದ ರಾಯರು ಕನ್ನಡ, ಮರಾಠಿ, ತೆಲುಗು, ತಮಿಳು, ಮತ್ತು ಉರ್ದು ಮುಂತಾದ ಭಾಷೆಗಳಲ್ಲಿ ದಾಸಸಾಹಿತ್ಯವನ್ನು ರಚಿಸಿದ್ದಾರೆ ಮಧ್ವ ಸಿದ್ಧಾಂತವನ್ನೂ ಸಂಪ್ರದಾಯವನ್ನೂ ಪ್ರತಿಪಾದಿಸುವ ಅವರ ಕೃತಿಗಳು ವೇದ ಉಪನಿಷತ್ತುಗಳ ಸಾರವೆಂದೇ ಹೇಳಬಹುದು ಅಪರೋಕ್ಷ ಜ್ಞಾನಿಗಳಾದ ರಾಯರು ಜಯವಿಜಯರ ಅವತಾರವೆಂದು ಪ್ರತೀತಿ

ಮಹಿಪತಿರಾಯರ ತಂದೆಯವರಾದ ಕೋನೇರಿರಾಯರು ವೈದಿಕ ವೃತ್ತಿಯಿಂದ ಜೀವಿಸುತ್ತಿದ್ದರು ಕೊಲ್ಹಾರದ ಪ್ರಲ್ಹಾದ ಕೃಷ್ಣಾಚಾರ್ಯರು ಅವರ ಕುಲ ಪುರೋಹಿತರು ಮಹಿಪತಿರಾಯರ ಜನ್ಮ ಕುಂಡಲಿ ನೋಡಿದಾಕ್ಷಣವೇ ಇವರು ಘನವಾದ ಪದವಿಗೆ ಏರುವರೆಂದು, ಶ್ರೇಷ್ಠ ಯೋಗಿಗಳಾಗುವರೆಂದು ಅಪರೋಕ್ಷ ಜ್ಞಾನಿಗಳಾದ ಪ್ರಲ್ಹಾದ ಕೃಷ್ಣಾಚಾರ್ಯರು ಭವಿಷ್ಯ ನುಡಿದರು ಚಿಕ್ಕ ವಯಸ್ಸಿನಲ್ಲಿಯೆ ರಾಮಾಯಣ, ಮಹಾಭಾರತ, ಭಾಗವತ, ವೇದ ಉಪನಿಷತ್ತುಗಳ ಅಧ್ಯಯನ ಮಾಡಿ ಪ್ರಭುತ್ವವನ್ನು ಗಳಿಸಿದರು

ವಿಜಾಪುರದ ನರಸಿಂಹ ದೇವಾಲಯದಲ್ಲಿ ನಿತ್ಯ ಪುರಾಣ ಪ್ರವಚನ ಪ್ರಾರಂಭಿಸಿದರು ಅವರ ಬಹು ಭಾಷಾ ಪಾಂಡಿತ್ಯ, ಶೈಲಿ, ವ್ಯಕ್ತಿತ್ವ ಎಲ್ಲರನ್ನು ಮಂತ್ರ ಮುಗ್ಧರನ್ನಾಗಿ ಮಾಡಿದವು ಹಿಂದುಗಳಲ್ಲದೇ ಮುಸಲ್ಮಾನ ಬಾಂಧವರೂ ಸಹ ಅವರ ಪುರಾಣ ಶ್ರವಣಕ್ಕಾಗಿ ಹಾತೊರೆಯುತ್ತಿದ್ದರು ಈ ರೀತಿ ಪ್ರಭಾವಿತರಾದವರಲ್ಲಿ ಖವಾಸಖಾನ ಸರದಾರನೂ ಒಬ್ಬ. ಸರದಾರರು ರಾಯರನ್ನು ಕರಣಿಕರನ್ನಾಗಿ ನೇಮಿಸಿ ತಮ್ಮ ನಿವಾಸದಲ್ಲಿ ಪುರಾಣ ಪ್ರವಚನವನ್ನು ಮಾಡಿಸಿದರು ಅವರು ಆದಿಲಶಾಹಿಗೆ ಮಹಿಪತಿರಾಯರ ವಿಷಯವನ್ನು ಅರುಹಿದರು ಮಹಾರಾಜರು ತಮ್ಮ "ರುಸಾನಾವಲ್ಲಿ" (ಅರಮನೆಯಲ್ಲಿ) ಪಾರ್ಸಿಭಾಷೆಯಲ್ಲಿ ರಾಯರ ಪುರಾಣ ಪ್ರವಚನ ವ್ಯವಸ್ಥೆಯನ್ನು ಮಾಡಿದರು ಪಾರ್ಸಿ ಭಾಷೆಯಲ್ಲಿ ಹಿಂದೂ ಪುರಾಣವನ್ನು ಕೇಳಿದ ಆದಿಲಶಾಹಿ, ಮಹಿಪತಿರಾಯರಲ್ಲಿ ಅತ್ಯಂತ ಭಕ್ತಿ ವಿಶ್ವಾಸ ಉಳ್ಳವರಾಗಿ, ವ್ಯವಹಾರ ಚತುರರಾದ ರಾಯರನ್ನು ಮಂತ್ರಿಯನ್ನಾಗಿ ನೇಮಿಸಿದರು ಈರೀತಿ ರಾಯರು ರಾಜ್ಯ ಕಾರಣ ಭಾರದ ಅನೇಕ ಸೂಕ್ಷ್ಮ ಸಮಸ್ಯೆಗಳನ್ನು ಅತ್ಯಂತ ಚಾಣಾಕ್ಷತನದಿಂದ ಪರಿಹಾರ ಮಾಡಿದರು

ಇದೇ ಕಾಲಕ್ಕೆ ವಿಜಾಪುರದಲ್ಲಿ ಶಾನುಂಗಾ ಶಾನುಂಗಿ ಎಂಬ ಇಸ್ಲಾಂ ದರ್ಮದ ವಿರಕ್ತರು ಸಂಚರಿಸುತ್ತಿದ್ದರು ಈ ಯೋಗಿಗಳಿಗೆ ಹಿಂದು ಮುಸಲ್ಮಾನರು ಗೌರವ ಭಾವನೆಯನ್ನು ಹೊಂದಿದ್ದರು ಈ ವಿರಕ್ತರು ಪವಾಡ ಪುರುಷರೆಂದು ಖ್ಯಾತಿಯೂ ಇತ್ತು ಒಂದು ದಿನ ದಿವಾನ ಮಹಿಪತಿರಾಯರು ಬೇಗಂ ತಲಾಬ ಕೆರೆಯ ಮೇಲೆ ವಿಚಾರಣೆಗಾಗಿ ಹೋಗುತ್ತಿದ್ದಾಗ ರಾಯರ ಜೀವನ ಯೋಗ್ಯತೆಯನ್ನು ಅರಿತ ಶಾನುಂಗಾ ಶಾನುಂಗಿ ವಲ್ಲಿಗಳು ರಾಯರಿಗೆ ಪಕ್ವಕಾಲ ಸಮೀಪಿಸಿದೆ ಎಂದು ಅರಿತು "ಅರೇ ಬೇಟಾ" ಎಂದು ಕೂಗಿ ಕರೆದರು ಭಯ ಭಕ್ತಿಯಿಂದ ರಾಯರು ನಮಸ್ಕರಿಸುತ್ತಲೇ ರಾಜ ಮುದ್ರಿಕೆ ಇದ್ದ ಉಂಗುರವನ್ನು ಕೊಡಲು ಕೇಳಿದರು ಹಿಂಜರಿಯುತ್ತಲೇ ರಾಯರು ಉಂಗುರವನ್ನು ಕೊಟ್ಟರು ತಕ್ಷಣವೇ ನರಸಿಂಹ ದೇವಾಲಯದ ಸಮೀಪದಲ್ಲಿ ಇರುವ ಆಳವಾದ ಕಂದಕದಲ್ಲಿ ಅದನ್ನು ಬಿಸಾಡಿ ಬಿಟ್ಟರು ಅತ್ಯಂತ ಮಹತ್ವ ಉಳ್ಳ ಉಂಗುರವನ್ನು ಕಳೆದುಕೊಂಡ ದಿವಾನರು ಗಾಬರಿಯಾದರು ಇದನ್ನು ಅರಿತ ಶಾನುಂಗಾ ಬಂಧುಗಳು ಕಂದಕವನ್ನು ಸಮೀಪಿಸಿ ನಸುನಗುತ್ತಲೇ ಬೊಗಸೆತುಂಬ ಒಂದೇ ಬಗೆಯ ಉಂಗುರಗಳನ್ನು ತೆಗೆದು, 'ನಿನ್ನ ಉಂಗುರವನ್ನು ತ[illegible]' ಎಂದು ರಾಯರಿಗೆ ಆಜ್ಞಾಪಿಸಿದರು ಈ [illegible]ಯನ್ನು ಕಂಡ ಮಹಿಪತಿರಾಯರಿಗೆ ವಿ[illegible] ಮಾರ್ಗದರ್ಶನ ಮಾಡ[illegible] ಕೆ[illegible] [illegible] ವಲ್ಲಿಗಳು ಸಾರವಾಡದಲ್ಲಿ ಇರುವ ಭಾಸ್ಕರ ಸ್ವಾ[illegible]ಗಳನ್ನು ಕಾಣಲು ಸೂಚಿಸಿದರು ಮಹಿಪ[illegible]ಯರು ಪತ್ನಿ ಸಮೇತರಾಗಿ ಭಾಸ್ಕರ ಸ್ವಾಮಿಗ[illegible] ಕಾಣಲು, ರಾಯರಿಗೆ ಸ್ವಾಮಿಗಳ ಪೂ[illegible] [illegible]ಗ್ರಹವಾಯಿತು ಮಕ್ಕಳಿಲ್ಲದ ಕೊರತೆಯೂ [illegible]ರಣೆ ಆಯಿತು ಭಾಸ್ಕರ ಸ್ವಾಮಿಗಳ ಅನುಗ್ರ[illegible]ದಿಂದ ಅತಿ ಕಠಿಣವಾದ ಯೋಗ ಸಾಧ[illegible] ೧೧ ತಿಂಗಳಲ್ಲಿಯೆ ಸಾಧಿಸಿಕೊಂಡರು ಸರ್ವ ಸಂಗ ಪರಿತ್ಯಾಗ ಮಾಡಿ ರಾಯರು ಸ್ವಾ[illegible] ದನೆಗಾಗಿ ಬಹಳಷ್ಟು ಅಲೆದರು ಪಡಬಾರದ ಕಷ್ಟಗಳನ್ನು ಅನುಭವಿಸಿದರು ಕೊನೆಗೆ ಶ್ರೀ ಹ[illegible] ಅನುಗ್ರಹದಿಂದ ಅಪರೋಕ್ಷ ಜ್ಞಾನವಾಗಿ ಸಾಕ್ಷಾತ್ಕಾರವಾಯಿತು ಮಹಿಪತಿರಾಯರು ಮಹಿಪತಿದಾಸರಾದರು ಅನೇಕಾನೇಕ ಹರಿ ಕೀರ್ತನೆಗಳನ್ನು ರಚಿಸಿದರು ಯೋಗದಲ್ಲಿ ಸಾಕ್ಷಾತ್ಕಾರದಿಂದ ಅನುಭವಿಸಿದ ಆನಂದವನ್ನು ಪದಪದ್ಯಗಳಲ್ಲಿ ನಿರೂಪಿಸಿದರು ವಿಜಾಪುರ ಜಿಲ್ಹೆಯ ಕಾಖಂಡಕಿ [illegible] ಗ್ರಾಮವನ್ನು ತಮ್ಮ ತಪೋಭೂಮಿಯನ್ನಾಗಿ ಆರಿಸಿಕೊಂಡರು ಪವಾಡಗಳು ಜರುಗಿದವು. ಆದರೆ ಪವಾಡಗಳನ್ನು ತೋರಿಸುವ ಇಚ್ಛೆ ದಾಸರಿಗೆ ಇರಲಿಲ್ಲ

ಉಂಡಾಡಿ ಆಗಿದ್ದ ಎರಡನೇ ಮಗ ಕೃಷ್ಣರಾಯರಿಗೆ ಜ್ಞಾನೋದಯ ಮಾಡಿ ತಾವೇ ನೇರ ಗುರುಗಳಾಗಿ ಉಪದೇಶಮಾಡಿ ಅವರಿಗೂ ಸಹ ದಾಸ ದೀಕ್ಷೆಯನ್ನು ನೀಡಿದರು ಕೃಷ್ಣ ದಾಸರ ಕೃತಿಗಳೆಂದರೆ ಮಹಿಪತಿದಾಸರ ಕೃತಿಗಳಿಗೆ ಟೀಕ ಟಿಪ್ಪಣಿಗಳಿದ್ದಂತೆ ಶ್ರೀ ಕೃಷ್ಣದಾಸರು "ನೆನೆದು ನಮಿಸುವೆ ವಾರಂವಾರ" ಎಂಬ ಕೀರ್ತನೆಯಲ್ಲಿ ಉತ್ತರಾದಿ ಮಠಾಧೀಶರ ಸ್ತುತಿಯನ್ನು ಹರಿದಾಸ ಪರಂಪರೆಯನ್ನು ತಮ್ಮ ವಂಶದ ಸಂಪ್ರದಾಯವನ್ನು ಸ್ವಾರಸ್ಯಮಯವಾಗಿ ವರ್ಣಿಸಿದ್ದಾರೆ ತಮ್ಮ ಗುರುಗಳಾದ ಮಹಿಪತಿದಾಸರ ಮಾರ್ಗದಲ್ಲಿಯೇ ನಡೆದು ಅಪರೋಕ್ಷಜ್ಞಾನಿಗಳಾಗಿದ್ದಾರೆ

ಈ ರೀತಿ ತುಂಬು ಜೀವನವನ್ನು ಸಾರ್ಥಕಗೊಳಿಸಿ ದಾಸರು ಕೃಷ್ಣಾತೀರವಾದ ಕೊಲ್ಹಾರದಲ್ಲಿ ತಮ್ಮ ಕುಲ ಪುರೋಹಿತರಾದ ಪ್ರಲ್ಹಾದ ಕೃಷ್ಣಾಚಾರ್ಯರ

---ಡಾ॥ ಸುಬಾಸ ಕೃಷ್ಣರಾವ

  

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ

### ಆಲಯ ಕಾರ್ಯಕ್ರಮ

| | |
|---|---|
| ಸುಪ್ರಬಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ರೂ 6--00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಬಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಬಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

**ವೇಪ್ಕಾರ್.**

ಸಾನಿಧ್ಯದಲ್ಲಿ ತಮ್ಮ ದೇಹವನ್ನಿಟ್ಟರು ಅವರ ಅಸ್ಥಿಗಳು ಅಗೋಚರವಾಗಲು ಕೃಷ್ಣರಾಯರಿಗೆ ಸ್ವಪ್ನದಲ್ಲಿ ಅಸ್ಥಿಗಳು ಭಾಗೀರದಿಯನ್ನು ಸೇರಿವೆ ಎಂದೂ, ತಮ್ಮ ಯೋಗ ಭೂಮಿಯಾದ ಕಾಖಂಡಕಿಯಲ್ಲಿ ೧೦೮ ಸಾಲಗ್ರಾಮಗಳ ಸನ್ನಿದಿಯಲ್ಲಿ ವೃಂದಾವನವನ್ನು ರಚಿಸಲು ಅಪ್ಪಣೆ ಮಾಡಿದರು

ಇಂದಿಗೂ ಸಹ ಗುರು ಮಹಿಪತಿದಾಸರ ವೃಂದಾವನ ಭಕ್ತರಿಗೆ ಕಾಮದೇನು ಕಲ್ಪವೃಕ್ಷವಾಗಿದೆ ಕಾಖಂಡಕಿಯಲ್ಲಿ ಪ್ರತಿವರ್ಷ ಆರಾದನೆ ವೈಭವದಿಂದ ಆಚರಿಸಲ್ಪಡುತ್ತದೆ

"ಶ್ರೀ ಮಹಿಪತಿದಾಸರ ಅನೇಕ ಕೀರ್ತನಗಳು ಸಾಹಿತ್ಯಸೌಂದರ್ಯದಿಂದಲೂ, ಜನಪದ ಸಾಹಿತ್ಯ ಶೈಲಿಯ ಲಾಲಿತ್ಯದಿಂದಲೂ, ನೀತಿ ಬೋದನೆಯಿಂದಲೂ ತುಂಬಿ ತುಳುಕುತ್ತವೆ ಅಪರೋಕ್ಷಾನುಭವದ ನಿವೇದನೆಯಂತೂ ಅವರ ಕೃತಿಗಳ ಜೀವಾಳ ಹರಿ -- ಗುರುಭಕ್ತಿಯ ಆವಿಷ್ಕರಣದ ಮೂಲಕವೂ ಯೋಗ ಸಾದನೆಯ ವಿವರಗಳ ನಿರೂಪಣೆಯ ಮೂಲಕವೂ ಅವರು ತಮ್ಮ ಅಪರೋಕ್ಷ ಜ್ಞಾನದ ಅನುಭವದ ಮತ್ತು ಹಂತಗಳ ನಿರೂಪಣೆಯನ್ನು ಮಾಡಿದ್ದಾರೆ ಅನೇಕ ಕೃತಿಗಳಲ್ಲಿ ಶ್ರೀ ಮಹಿಪತಿದಾಸರು ಹರಿ ಸರ್ವೋತ್ತಮತ್ವ ಅದಕ್ಕನುಗುಣವಾದ ದಾಸ ಭಾವಪೂರ್ಣವಾದ ಭಕ್ತಿ, ಹರಿಯ ಅಂತರ್ಯಾಮಿತ್ವ, ಪ್ರೇರತ್ವ, ಸಮರ್ಪಣ ಭಾವದಿಂದ ಸಕಲ ಕರ್ಮಾನುಷ್ಠಾನ, ಹೃದಯದಲ್ಲಿದ್ದ ಬಿಂಬ ರೂಪೀ ಪರಮಾತ್ಮನ ಸಾಕ್ಷಾತ್ಕಾರ, ಸ್ವಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷ ಎಂಬ ಈ ಶ್ರೀ ಮಧ್ವ ಸಂಪ್ರದಾಯದ ಪ್ರಮೇಯಗಳನ್ನು ಸ್ಪಷ್ಟವಾಗಿ ಹೇಳಿದ್ದಾರೆ ಶ್ರೀ ಮಹಿಪತಿದಾಸರು "ಅದ್ವೈತ ಭಕ್ತಿಯ" ಪರಿಭಾಷೆಯನ್ನು ಕೆಲವು ಕೃತಿಗಳಲ್ಲಿ ಉಪಯೋಗಿಸಿದ್ದು ನಿಜ ಆದರೆ ಆಯಾ ಕೃತಿಗಳಲ್ಲಿಯೇ ತಮಗೆ ಅಭಿಪ್ರೇತವಾದ ತಾತ್ವಿಕ ಪರಿಪಾಠಿಯನ್ನು ವಿವರಿಸಿದ್ದಾರೆ ಅವರ ತಾತ್ವಿಕ ತಳಹದಿ ಶ್ರೀ ಮಧ್ವ ಸಂಪ್ರದಾಯದ ತಾತ್ವಿಕ ತಳಹದಿ ಎಂಬುದು ನೂರಾರು ಕೀರ್ತನೆಗಳಲ್ಲಿ ಸ್ಪಷ್ಟವಿದೆ"

ಮಹಿಪತಿದಾಸರ ಅನೇಕ ಕೃತಿಗಳನ್ನು ಇಲಕಲ್ಲಿನ ಅವರ ವಂಶಜರಾದ ವೈಕುಂಠವಾಸಿ ಡಾ|| ಕೃಷ್ಣರಾವ, ಅಣ್ಣಾರಾವ, ಕಾಖಂಡಕಿಯವರು ಪ್ರಕಟಿಸಿ ದಾಸರ ಕೀರ್ತನೆಗಳನ್ನು ಬೆಳಕಿಗೆ ತಂದಿದ್ದಾರೆ ಅದೇ ರೀತಿ -- ಮೈಸೂರು ವಿಶ್ವವಿದ್ಯಾಲಯದ ಶ್ರೀ ವರದರಾಜರಾಯರು ಮಾಡಿದ ಸೇವೆ ಅಮೂಲ್ಯ ಮಹಿಪತಿದಾಸರ ಹಾಗೂ ಕೃಷ್ಣದಾಸರ ಅನೇಕ ಕೃತಿಗಳು ಇನ್ನು ಅಪ್ರಕಟಿತವಾಗಿವೆ ಅವುಗಳನ್ನು ಸಮಗ್ರವಾಗಿ ಅಭ್ಯಸಿಸಿ ಪ್ರಕಾಶಿತಗೊಳಿಸುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ 

# ಶ್ರೀ ಮೊದಲಿಯಾಂಡಾನ್

---ಕಂದಾಡೈ ಕೇಶವನ್

ಶ್ರೀ ವೈಷ್ಣವ ಸಿದ್ಧಾಂತ ಪ್ರವರ್ತಕರಾದ ಶ್ರೀ ರಾಮಾನುಜರ ಶಿಷ್ಯರಲ್ಲಿ ಶ್ರೀ ಮೊದಲಿಯಾಂ ಡಾನ್ (ದಾಶರದಿ) ರಾಮಾನುಜರಿಗೆ ಬಹು ಪ್ರೀತಿ ಪರರು ಮೊದಲಿಯಾಂಡಾನ್‌ರವರ ತಿರುನಕ್ಷತ್ರ ದಿವಸ ಅವರನ್ನು ಕೊಂಡಾಡುವ ತನಿಯನ್ ಈ ಶ್ಲೋಕವನ್ನು ಶ್ರೀ ವೈಷ್ಣವರು ತಪ್ಪದೆ ಪಠಿಸುತ್ತಾರೆ

ಮಾಘೇ ಪುನರ್ವಸೂ ಜಾತಂ
ದಶಮ್ಯಾಂ ಕೃಷ್ಣಪಕ್ಷಕೆ
ಆಶ್ರಯೇ ದಾಶರದ್ವಾರ್ಯಂ
ಯತಿ ರಾಜ ಪದಾಶ್ರಯಮ್

ಪಾದುಕೇ ಯತಿರಾಜಸ್ಯ
ಕದಯಂತಿ ಯದಾಖ್ಯಯಾ
ತಸ್ಯ ದಾಶರದೇ ಪಾದೌ
ಶಿರಸಾ ದಾರಯಾಮ್ಯಹಂ

ಭಗವದ್‌ರಾಮಾನುಜರು ವಿಶಿಷ್ಟಾದ್ವೈತ ಸಿದ್ಧಾಂತವನ್ನು ಕ್ರಿಶ ೧೦೫೦ ರಿಂದ ಸುಮಾರು ಅರವತ್ತು ವರ್ಷ ಭಾರತವರ್ಷದಲ್ಲಿ ಪ್ರಚಾರ ಮಾಡಿದರು ಶ್ರೀ ರಾಮಾನುಜರ ಶ್ರೀ ಪಾದಗಳಲ್ಲಿ ೭೦೦ ಯತಿಗಳು, ಎಪ್ಪತ್ತು ನಾಲ್ಕು ಸಿಂಹಾಸನಾದಿಪತಿಗಳು ಆಶ್ರಯಣ ಹೊಂದಿ ಕೃತಕೃತ್ಯರಾದರು ಎಪ್ಪತ್ತು ನಾಲ್ಕು ಸಿಂಹಾಸನಾದಿಪತಿಗಳೇ ಆಚಾರ್ಯರು ಅವರಲ್ಲಿ ಶ್ರೀ ಮೊದಲಿಯಾಂಡನ್ ಕೂಡ ಒಬ್ಬರು ಮೊದಲಿಯಾಂಡಾನ್ (ದಾಶರದಿ) ಶ್ರೀರಾಮಾನುಜರ ಸೋದರಳಿಯ ಶ್ರೀ ರಾಮಾನುಜರು ಚೋಳ ದೇಶವನ್ನು ಬಿಟ್ಟು ಮೈಸೂರು ದೇಶಕ್ಕೆ ರಾಮನಾದ ಪುರದ ಮಾರ್ಗ ಸಾಲಿಗ್ರಾಮಕ್ಕೆ ಬಂದಾಗ ಅವರ ಜೊತೆಯಲ್ಲಿ ದಾಶರದಿಯು ಕೂಡ ಬಂದರು ಸಾಲಿಗ್ರಾಮದಲ್ಲಿ ಶ್ರೀ ರಾಮಾನುಜರಿಗೆ ಸರಿಯಾದ ಸ್ವಾಗತ ಮರ್ಯಾದೆ ದೊರಕಲಿಲ್ಲ ಅಲ್ಲಿನ ಜನರು ಬಹಳ ನಾಸ್ತಿಕರಾಗಿದ್ದರು ಅದನ್ನು ಕಂಡ ಮೊದಲಿಯಾಂಡಾನ್ ಬಹಳ ನೊಂದು ಈ ವಿಷಯವನ್ನು ರಾಮಾನುಜರಿಗೆ ತಿಳಿಸಿದರು ಆಗ ಶ್ರೀ ರಾಮಾನುಜರು "ದಾಶರದಿ, ನೀನು ಇದಕ್ಕೆ ದು ಖಪಡಬೇಕಾಗಿಲ್ಲ ಇಲ್ಲಿ ಹರಿಯುವ ಕೊಳದ ನೀರನ್ನು ಗ್ರಾಮದವರು ಪ್ರತಿ ನಿತ್ಯ ಕುಡಿಯಲು ಉಪಯೋಗಿಸುತ್ತಾರೆ ನೀನು ನಿನ್ನೆರಡು ಪಾದಗಳನ್ನು ಅದರಲ್ಲಿ ತೊಳೆದುಕೊಂಡು ಬಾ ಆಮೇಲೆ ಈಶ್ವರನ ಲೀಲೆಯನ್ನು ನೋಡುವಾ" ಎಂಬುವುದಾಗಿ ಆದೇಶ ನೀಡಿದರು ಮೊದಲಿಯಾಂಡಾನ್ ಅದೇ ರೀತಿ ಆಚರಿಸಲು ಆ ನೀರನ್ನು ಕುಡಿದ ಗ್ರಾಮಸ್ಥರು ಸಾತ್ವಿಕರಾಗಿ ಶ್ರೀ ರಾಮಾನುಜರಲ್ಲಿ ಭಕ್ತಿ ಪ್ರೇಮ ತೋರಿದರು ಸಾಲಿಗ್ರಾಮದಲ್ಲಿ ಈ ಕೊಳದ ಬಳಿ ಈಗಲೂ ಒಂದು ಮಂಟಪವಿದೆ ಅಲ್ಲಿನ ಗುಡಿಯಲ್ಲಿ ಶ್ರೀ ರಾಮಾನುಜರ ಪಾದಗಳು ಇವೆ ಯಾತ್ರಿಕರು ಈ ಶ್ರೀ ರಾಮಾನುಜರ ಮಂಟಪದಲ್ಲಿ ನೀರನ್ನು ಶ್ರೀ ಪಾದತೀರ್ಥವೆಂದು ಸ್ವೀಕರಿಸಿ ಕೃತಕೃತ್ಯರಾಗುತ್ತಾರೆ ಈ ಮಂಟಪ ಈ ಕೊಳ ವಡುಗನಂಬಿ (ಆಂಧ್ರಪೂರ್ಣ) ಅವರ ವಂಶಸ್ಥರಿಗೆ ಸೇರಿ ಅವರ ಪೂಜಾದಿಗಳನ್ನು ವಿಶೇಷ ದಿನಗಳಲ್ಲಿ ವಡುಹನಂಬಿ ವಂಶಸ್ಥರು ಆಚರಿಸುತ್ತಿದ್ದಾರೆ

ಶ್ರೀ ರಾಮಾನುಜರ ಅಂತರಂಗ ನಿತ್ಯ ಕೈಂಕರ್ಯದಲ್ಲಿ ಶ್ರೀ ಕೂರತ್ತಾಳ್ವಾರ್, ಮೊದಲಿಯಾಂಡಾನ್ ಮತ್ತು ನಡಾದೂರಾಳ್ವಾನ್ ಸಹಕರಿಸುತ್ತಿದ್ದರು ಇವರಿಗೆ ಶ್ರೀ ಭಾಷ್ಯಪ್ರವಚನ ಕಾಲದಲ್ಲಿ ಶ್ರೀ ರಾಮಾನುಜರ ಸಮೀಪದಲ್ಲಿ ಅವರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು ಆದರೆ ಶ್ರೀ ಮುದಲಿಯಾಂಡಾನ್‌ರವರು ಮಾತ್ರ ರಾಮಾನುಜರ ಶ್ರೀ ಪಾದಗಳಲ್ಲಿ ಆಶ್ರಯಣ ಹೊಂದಿ ಅವರನ್ನೇ ಉಪಾಯೋಪೇಯವೆಂದು ನಂಬಿ ತ್ರಿಕರಣ ಪೂರ್ವಕವಾಗಿ ಅವರ ಸೇವೆಯನ್ನು ಮಾಡುತ್ತಾ ಅವರಿಗೆ ಹೆಚ್ಚಿನ ಪ್ರೀತಿಪಾತ್ರರಾದ ಶಿಷ್ಯರಾಗಿದ್ದರು ಶ್ರೀ ಮೊದಲಿಯಾಂಡಾನ್ ಪೂರ್ವಾಶ್ರಮದಲ್ಲಿ (ಶ್ರೀ ರಾಮಾನುಜರ ಶಿಷ್ಯರಾಗುವ ಮುನ್ನ) ವಿದ್ಯಾ ಮದಾಂದರಾಗಿ ತಮ್ಮ ಆಗರ್ಭ ಶ್ರೀ ಮ ಂತಮದದಿಂದ ಗರ್ವಿತರಾಗಿದ್ದರು ರಾಮಾನುಜರ ಕೃಪಾಕಟಾಕ್ಷೆಯಿಂದ ಮೊದಲಿಯಾಂಡಾನ್ ತಿರುಕ್ಕೊಟ್ಟಿಯೂರ್ ನಂಬಿಗಳ ಅಬಿಮಾನಕ್ಕೆ ಪಾತ್ರರಾಗಿ ಅವರಿಂದ ಕಾಲಕ್ಷೇಪವನ್ನು ಹೊಂದಿ ಸ್ವರೂಪಜ್ಞಾನವನ್ನು ಪಡೆದವರಲ್ಲಿ ಇವರೇ ಮೊದಲಿಗರು ಕೂರೇಶರು, ದಾಶರದಿ ದೇವರಾಜಮುನಿ ಹಾಗೂ ಎಂಬಾರ್ ಆಗಿನ ಕಾಲಕ್ಕೆ ವಿಶಿಷ್ಟಾದ್ವೈತಮತದಲ್ಲಿ ನುರಿತ ವಿದ್ವನ್ಮಣಿಗಳು

ಶ್ರೀ ರಾಮಾನುಜರು ಪ್ರತಿ ನಿತ್ಯ ಸ್ನಾನಾದಿಗಳಿಗೆ ನದಿಗೆ ಹೋಗುವಾಗ ದಾಶರಥಿಯ ಹೆಗಲ ಮೇಲೆ ಕೈ ಹಾಕಿಕೊಂಡು ಹೋಗುವ ಅಭ್ಯಾಸವನ್ನು ಆಚರಿಸುತ್ತಿದ್ದರು ಇದನ್ನು ಕಂಡ ಕೆಲವು ಶ್ರೀ ವೈಷ್ಣವರು ಅಸೂಯೆಯಿಂದ ಶ್ರೀ ರಾಮಾನುಜರು ಸನ್ಯಾಸಿಯಾಗಿ ಸರ್ವಸಂಗ ಪರಿತ್ಯಾಗ ಮಾಡಿ ಕಾಷಾಯ ವಸ್ತ್ರವನ್ನು ಸ್ವೀಕರಿಸಿದಾಗ್ಯೂ – ಜ್ಞಾತಿಗಳ ರಕ್ತ ಸಂಬಂಧದ ಅಭಿಮಾನ ತಪ್ಪಲಿಲ್ಲವಲ್ಲಾ ಎಂಬುವುದಾಗಿ ಆಕ್ಷೇಪಣೆ ಮಾಡತೊಡಗಿದರು ಇದನ್ನು ತಿಳಿದ ರಾಮಾನುಜರು ಶ್ರೀ ವೈಷ್ಣವ ಗೋಷ್ಠಿಯಲ್ಲಿ ತಮ್ಮ ಮೇಲಿರುವ ಆಕ್ಷೇಪಣೆಯನ್ನು ಸೂಚಿಸಿ ಅದಕ್ಕೆ ಉತ್ತರವಾಗಿ "ನಾನು ಸನ್ಯಾಸ ತಗೆದುಕೊಂಡಾಗ ಮೊದಲಿಯಾಂಡಾನ್ ಹೊರತು ಸನ್ಯಾಸ ಸ್ವೀಕರಿಸಿದೇನ ಆತನು ನನಗೆ ರಕ್ತ ಸಂಬಂಧಿಯಾದರೂ ಅದಕ್ಕಿಂತ ಮಿಗಿಲಾಗಿ ನನಗೆ ಆತ್ಮಸಂಬಂಧಿಯು ನನ್ನ ಉಸಿರು ಅವನು" ಎಂಬುವುದಾಗಿ ತಿಳಿಸಿದರು

ಶ್ರೀ ರಾಮಾನುಜರು ಮಹಾ ಪೂರ್ಣರಲ್ಲಿ ವೇದ ಪುರಾಣ ಪ್ರಬಂಧಗಳ ರಹಸ್ಯಾರ್ಥಗಳನ್ನು ತಿಳಿದುಕೊಂಡ ಮೇಲೆ ಸರ್ವಶ್ರೇಷ್ಠವಾದ ಧ್ವಯಮಂತ್ರದ ವಿಶೇಷಾರ್ಥಗಳನ್ನು ತಿಳಿಯಲು ಪುದುಕೋಟೆಯಲ್ಲಿ ನೆಲೆಸಿದ್ದ ಗೋಷ್ಠಿ ಪೂರ್ಣರಲ್ಲಿ ಹೋಗಿ ಅವರಿಗೆ ನಮಸ್ಕಾರ ಮಾಡಿ ತಮಗೆ ತತ್ವಾರ್ಥ ಜ್ಞಾನವನ್ನು ನೀಡಲು ಬೇಡಿಕೊಂಡರು ಗೋಷ್ಠಿ ಪೂರ್ಣರು ಶ್ರೀರಾಮಾನುಜರ ಗುರುಭಕ್ತಿಯನ್ನು ಪರೀಕ್ಷಿಸಲು ಮತ್ತೆ ಬರುವಂತೆ ತಿಳಿಸಿದರು ರಾಮಾನುಜರು ಶ್ರೀರಂಗಕ್ಕೆ ಸಂತೋಷದಿಂದ ಹಿಂತಿರುಗಿದರು ಮತ್ತೆ ಹೋದಾಗ ಇನ್ನೊಮ್ಮೆ ಬರುವಂತೆ ಅಜ್ಞಾಪಿಸಿದರು ಈಗೆ ಹದಿನೆಂಟು ಸಲ ರಾಮಾನುಜರು ಶ್ರೀರಂಗದಿಂದ ಪುದುಕೋಟೆಗೆ ಹೋಗಿ ಹಿಂತಿರುಗಿದರು ಇದನ್ನು ಗಮನಿಸಿದ ಗೋಷ್ಠೀಪೂರ್ಣರ ಶಿಷ್ಯರು "ಸ್ವಾಮಿ ತಾವು ಶಿಷ್ಯರಿಗೆ ಅನುಗ್ರಹಮಾಡದಿದ್ದರೆ ಇನ್ನು ಯಾರು ಮಾಡಬೇಕು ರಾಮಾನುಜರ ಶ್ರದ್ಧೆ ಭಕ್ತಿ ಅಚಲವಾದದು ಅವರಿಗೆ ನೀವು ಅನುಗ್ರಹಮಾಡಬೇಕೆಂದು ವಿಜ್ಞಾಪಿಸಿಕೊಂಡರು ಆಗ ಗೋಷ್ಠೀಪೂರ್ಣರು ರಾಮಾನುಜರು ತಮ್ಮಲ್ಲಿ ಕಾಷಾಯ ಮತ್ತು ತ್ರಿದಂಡಗಳ ಸಮೇತ ಒಬ್ಬನೇ ಬಂದರ ಉಪದೇಶಮಾಡುವೆನೆಂದು ಹೇಳಿಕಳುಹಿಸಿದರು ಈ ವಿಷಯವನ್ನು ತಿಳಿದ ರಾಮಾನುಜರು ತಮ್ಮೊಡನೆ ಕೂರೇಶ ಮತ್ತು ಮೊದಲಿಯಾಂಡಾನ್‌ರವರನ್ನು ಕರೆದುಕೊಂಡು ಹೋಗಿ ಗೋಷ್ಠೀಪೂರ್ಣರ ಪಾದಗಳಿಗೆರಗಿದರು ಶ್ರೀ ರಾಮಾನುಜರನ್ನು ಕಂಡ ಗೋಷ್ಠೀ ಪೂರ್ಣರು "ಇದೇನು ರಾಮಾನುಜರೇ ನೀವು ಒಬ್ಬರೇ ಕಾಷಾಯ ತ್ರಿದಂಡದೊಡನೆ ಬರಲು

ಹೇಳಿದ್ದಿರೆ ನಿಮ್ಮೊಡನೆ ಇವರಿಬ್ಬರನ್ನೂ ಕರೆದು ತಂದಿರುವಿರಿ ?" ಎಂಬುವುದಾಗಿ ಪ್ರಶ್ನಿಸಲು, ಶ್ರೀರಾಮಾನುಜರು "ಸ್ವಾಮಿ ನನಗೆ ದಾಶರದಿ (ಮೊದಲಿಯಾಂಡಾನ್) ತ್ರಿದಂಡ, ಕೂರೇಶರು ಕಾಷಾಯ ಅವರೇ ನನ್ನ ಸರ್ವಸ್ವ. ಅವರ ಹೊರತು ನಾನಿಲ್ಲ ನನ್ನನ್ನು ಬಿಟ್ಟು ಅವರು ಜೀವಿಸಲಾರರು" ಎಂಬುವುದಾಗಿ ತಿಳಿಸಿದರು ಶ್ರೀ ರಾಮಾನುಜರ ಶಿಷ್ಯ ಪ್ರೇಮವನ್ನು ಕಂಡು ಗೋಷ್ಠೀ ಪೂರ್ಣರು ಸಂತೋಷಗೊಂಡರು

ಒಂದು ಸಲ ಮಹಾಪೂರ್ಣರ ಕುಮಾರ್ತಿ ಅತ್ತುಳಾಯಮ್ಮ ತನ್ನ ಅತ್ತೆಯ ಮನೆಯಲ್ಲಿ ರಜಸ್ವಲೆಯಾಗಿ ಸ್ನಾನಕ್ಕಾಗಿ ನದಿಗೆ ಹೋಗಲು ಅತ್ತೆಯನ್ನು ಕರೆಯಲು ಆಕೆ ಸಿಡುಕಿನಿಂದ "ನಿನ್ನ ತವರು ಮನೆಯಿಂದ ತಂದ ಸ್ತ್ರೀದನ ಭೃತ್ಯಳನ್ನು ಜೊತೆಯಲ್ಲಿ ಕರೆದುಕೊಂಡು ಹೋಗು" ಎಂಬುವುದಾಗಿ ಹೇಳಿದಳು ಚಿಕ್ಕವಳಾದ ಅತ್ತುಳಾಯ್‌ಮ್ಮ ಅಳುತ್ತಾ ಮಹಾ ಪೂರ್ಣರ ಬಳಿಗೆ ಬಂದು ವಿಚಾರವನ್ನು ತಿಳಿಸಿದಳು ಈ ವಿಷಯವು ಶ್ರೀ ರಾಮಾನುಜರಿಗೆ ತಿಳಿಯಿತು

ತಕ್ಷಣವೇ ತನ್ನ ಪಕ್ಕದಲ್ಲಿದ್ದ ಮೊದಲಿಯಾಂಡನನ್ನು ಕರೆದು ಅತ್ತುಳಾಯಮ್ಮನ ಸ್ತ್ರೀದನ ನೀನು ಆಕೆಯ ಜೊತೆಯಲ್ಲಿ ಹೋಗಿ, ಆಕೆ ಹೇಳಿದಂತೆ ನಡೆದುಕೋ ಎಂಬುವುದಾಗಿ ಆಜ್ಞಾಪಿಸಿದರು ಮೊದಲಿಯಾಂಡಾನ್ ಆಕೆಯನ್ನು ನದಿಗೆ ಕರೆದುಕೊಂಡು ಹೋಗಿ, ಸ್ನಾನವಾದನಂತರ ಅತ್ತುಳಾಯಮ್ಮನ ಅತ್ತೆ ಮನೆಗೆ ಬಂದು ಅವರ ಮನೆಯಲ್ಲಿ ಕೆಲಸಗಳನ್ನು ಮಾಡುತ್ತಾ ನಿಂತರು ಅತ್ತುಳಾಯಮ್ಮನ ಅತ್ತೆ ತಮ್ಮ ಮನೆಯಲ್ಲಿ ಕೆಲಸಮಾಡುತ್ತಿರುವವರು ಜ್ಞಾನವಂತರು, ಮಹಾ ವಿದ್ವಾಂಸರೂ ಆದ ಮುದಲಿಯಾಂಡಾನ್ ಎಂಬುವುದನ್ನು ಅರಿತು ಅವರನ್ನು ಕುರಿತು "ಸ್ವಾಮಿ ತಾವು ರಾಮಾನುಜರ ಸೇವೆಯನ್ನು ಬಿಟ್ಟು, ನಮ್ಮ ಮನೆಯಲ್ಲಿ ಈ ಕೀಳು ಮನೆಗೆಲಸವನ್ನು ಮಾಡುವುದು ಉಚಿತವೇ" ಎಂಬುವುದಾಗಿ ಪ್ರಶ್ನಿಸಿದಳು ಅದಕ್ಕೆ ಮುದಲಿಯಾಂಡಾನ್ "ನಾನು ರಾಮಾನುಜರ ದಾಸ ನಾನು ಸ್ವತಂತ್ರನಲ್ಲ ಆಚಾರ್ಯರು ನೇಮಿಸುವ ಕಾರ್ಯವನ್ನು ಮಾಡುವುದೇ ನನ್ನ ದರ್ಮ ಅವರ ಅಪ್ಪಣೆಯಂತೆ ನಿಮ್ಮ ಗೃಹಸೇವೆಯಲ್ಲಿ ನಿರತನಾಗಿದ್ದೇನೆ" ಎಂಬುವುದಾಗಿ ತಿಳಿಸಿದರು ಭಕ್ತ ಶಿರೋಮಣಿ ಮಹಾ ಭಾಗವತರು ಮನೆಯ ಕೆಲಸ ಮಾಡಿದರೆ ತಮಗೆ ಮಹಾ ಪಾಪ ಬರುವುದೆಂದು ತಿಳಿದು ರಾಮಾನುಜರ ಬಳಿ ಹೋಗಿ ಅವರ ಅತ್ತೆಯು ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಕೇಳಿಕೊಳ್ಳಲು ರಾಮಾನುಜರು "ತಾಯಿ ಮೊದಲಿಯಾಂಡಾನನ್ನು ಅತ್ತುಳಾಯಮ್ಮನ ಸ್ತ್ರೀ ದನವಾಗಿ ಕಳುಹಿಸಿದ್ದೆ ಅದು ನಿಮಗೆ ಬೇಡವಾದರೆ ಹಿಂತಿರುಗಿ ಕಳುಹಿಸಿ" ಎಂಬುವುದಾಗಿ ಹೇಳಿದ ಮೇಲೆ ಮೊದಲಿಯಾಂಡಾನ್‌ರವರನ್ನು ಶ್ರೀ ರಾಮಾನುಜರಲ್ಲಿಗೆ ಹಿಂದಿರುಗಿ ಕಳುಹಿಸಿದಳು ಶ್ರೀ ರಾಮಾನುಜರನ್ನು ಕುರಿತು ಅವರು ಬರೆದ ದಾಟೀ ಪಂಚಕವು ಶ್ರೀ ವೈಷ್ಣವರಿಗೆ ನಿತ್ಯ ಸ್ಮರಣೆಯ ಶ್ಲೋಕ ಪಂಚಕವಾಗಿದೆ ದಾಟೀ ಪಂಚಕವನ್ನು ಕುರಿತು ಹೊಗಳುವ "ಯಚ್ಛಕ್ರೇ ಭಕ್ತನಗರೇ ಧಾಟೀ ಪಂಚಕ ಮುತ್ತಮಂ ರಾಮಾನುಜಾರ್ಯ ಸಚ್ಛಾತ್ರಂ ವಂದೇ ದಾಶರದಿಂ ಗುರುಂ" ಸ್ತೋತ್ರ ಅನುಸಂದೇಯವು.

"ಪಾಷಾಂಡ -- ದ್ರುಮಷಂಡ " ಎಂಬುವುದಾಗಿ ಮೊದಲಾಗಿ ಐದನೆಯ "ರಾಮಾನುಜೋ ವಿಜಯತೇ ಯತಿರಾಜರಾಜ " ಎಂಬುವುದಾಗಿ ಕೊನೆಗೊಳ್ಳುವ ಸ್ತೋತ್ರ ಪ್ರಾದ ಸ್ಮರಣೀಯ ಮೊದಲಿಯಾಂಡನ್ ಕುಮಾರರಾದ ಕಂದಾಡೈ ಆಂಡನ್ ಅವರ ಮೊಮ್ಮಗ ಕಂದಾಡೈ ಕೋಲಪ್ಪರ್ ಅನೇಕ ಶಿಷ್ಯರಿಗೆ ವಿಶಿಷ್ಟಾದ್ವೈತಮತವನ್ನು ಉಪದೇಶಿಸಿ ಲಕ್ಷಾಂತರ ಶಿಷ್ಯರನ್ನು ಉದ್ಧಾರ ಮಾಡಿದರು ಮೊದಲಿಯಾಂಡಾನ್‌ರವರ ತಿರುಮಾಳಿಗೆ ತೆನ್ನಾಚಾರ್ಯ ಸಂಪ್ರದಾಯವನ್ನು ಮುಂದಕ್ಕೆ ತಂದರು ಅವರ ಮಠಗಳು ಅನೇಕವಿದ್ದರೂ ಈಗಲೂ ಬಹು ಪ್ರಸಿದ್ಧವಾದುವು-ಸಿಂಗ ಪೆರುಮಾಳ್‌ಕೋಯಿಲ್, ಷೋಲಿಂಗಾರ್, ತೇಕ್ಕನ್ ಕುಲಮ್, ಶ್ರೀರಂಗಂ, ಕಾಂಚೀಪುರಮ್, ತಿರುನಾರಾಯಣಪುರ (ಮೇಲುಕೋಟೆ) ತಿರುಮಾಳಿಗೆಗಳು ಆಚಾರ್ಯರ ಉಪದೇಶ ಸಮಾಶ್ರಾಯಣವನ್ನು ಪಡೆಯಲು ಶಿಷ್ಯರು ನಿತ್ಯವೂ ಮೊರೆ ಹೋಗುತ್ತಿದ್ದಾರೆ ೬೦೦ ವರ್ಷಗಳ ಹಿಂದೆ ಶ್ರೀ ಪಟಲಾದ್ರಿ ನರಸಿಂಹಸ್ವಾಮಿ ದೇವಸ್ಥಾನವನ್ನು ಚಂಗಲ್‌ಪೇಟೆ ಉತ್ತರವಿರುವ ಸಿಂಗಪೆರುಮಾಳ್ ಕೋಯಿಲ್‌ನಲ್ಲಿ ಸ್ಥಾಪಿಸಿದವರು ಮೊದಲಿಯಾಂಡಾನ್‌ರವರು

ಕರ್ನಾಟಕದ ಬೇಲೂರು ದೇವಸ್ಥಾನದ ರೂಪರೇಷೆ, ಅಲ್ಲಿನ ಶಿಲಾವಿನ್ಯಾಸ -- ಕೇಶವ ವಿಗ್ರವನ್ನು ಸಂಪ್ರೋಕ್ಷಣೆ ಮಾಡಿದ ಹಿರಿಮೆ ಮೊದಲಿಯಾಂಡಾನ್ ರವರಿಗೆ ಸಲ್ಲಬೇಕು ಶ್ರೀ ರಾಮಾನುಜರು ಮೊದಲಿಯಾಂಡಾನ್ ರವರ ಇಚ್ಛೆಯಂತೆ ಹತ್ತು ವಾರ್ತೆ (ರಹಸ್ಯ ಅರ್ದ) ಗಳನ್ನು ಚೇತನರ ಉದ್ಧಾರಕ್ಕಾಗಿ ಉಪದೇಶಿಸಿದರು ಮೊದಲ ವಾರ್ತೆ ಗುರು ಶಿಷ್ಯರ ಸಂಬಂಧ ಎರಡನೆಯ ವಾರ್ತೆಯಲ್ಲಿ ದಿವ್ಯದೇಶಗಳಲ್ಲಿ ಶ್ರೇಷ್ಠವಾದ ಶ್ರೀರಂಗ ತಿರುಪತಿ ಕಾಂಚೀಪುರಗಳ ವೈಭವ, ತಾರತಮ್ಯ ಮನಸ್ಸು ಭಗವಂತನನ್ನು ಅವಲಂಭಿಸುವ ವಿದಾನ ಮೂರನೆಯ ವಾರ್ತೆಯಲ್ಲಿ ಆಳ್ವಾರ್ ಪೆರಿಯಾಳ್ವಾರರಿಗೆ ತಾರತಮ್ಯ ನಿರ್ಮಲ ಬುದ್ಧಿಯಿಂದ ಭಗವಂತನ ಉಪಾಸನೆ ವಿವರ ನಾಲ್ಕನೆಯ ವಾರ್ತೆ ನದಿ ಸಮುದ್ರದ ತಾರತಮ್ಯದೊಡನೆ ಮನಸ್ಸಿನ ವಿವಿದ ಸ್ಥಿತಿ, ಸುಖದು ಖಗಳ ತಾರತಮ್ಯ ತಳರ್ ತನತನರು ಕುಮ್‌ಶಾರಾರ್ ಹಾಗೂ ತರು ತುಯರಮ್ ತಡಾಯೇಲ್ ಎಂಬುವ ತಿರುಮೊಳಿಯ ಅರ್ದ ವೈಭವ ವಿವರಣೆ ಐದನೆಯ ವಾರ್ತೆ ಅಣುವಿಗೂ ಮಹತ್ತಿಗೂ ತಾರತಮ್ಯ ನಮ್ಮ ಸಂಬಂದ, ಬಗವತ್ ಸಂಬಂದ ಸಿಂಹಾವಲೋಕನ ಆರನೆಯ ವಾರ್ತೆ ವೇದಶಾಸ್ತ್ರ ದ್ವಯಾರ್ದ ಮಹಿಮೆ ಏಳನೆಯ ವಾರ್ತೆ ನಿತ್ಯ ವಿಭೂತಿ ಲೀಲಾವಿಭೂತಿ ವೈಭವ ಈ ವಾರ್ತಾ ಮಂಜರಿಯಲ್ಲಿ "ಮಣ್ಣಿಳಿನ್ನೆ ಪೆತ್ತಾಲೆನ್ ಶೆಯ್ಯಾ -- ಅರುತ್ತಿನ್ನಿಡ ವಂಜಿನಿನ್ನಡೈನ್ದೇನ್ -- ಪಲನೀ ಕಾಟ್ಟಿಪ್ಪಡುಪ್ಪಾಯೋ - ತಿರುಮಾಲೋ ಇನಿಚ್ಚೆಮ್ ವತೊನ್ನರಿಯೇನ್ ಎಂಬುವ ಪಾಶುರಗಳಿಗೆ ಶರಣಾಗತಿಯ ವಿವರಣೆ ಎಂಟನೆಯ ವಾರ್ತೆ ಸರ್ವೇಶ್ವರನ ಸಹಸ್ರನಾಮ ಶ್ರೀ ಬಗವದ್ಗೀತಾಸಾರವನ್ನು ಇಲ್ಲಿ ಉಪದೇಶಿಸಿದರು ಒಂಬತ್ತನೆಯ ವಾರ್ತೆ ತಿರುಮಂತ್ರ ಅನುಸಂದಾನ ಫಲ ಹತ್ತನೆಯ ವಾರ್ತೆಯಲ್ಲಿ ಶ್ರೀ ರಾಮಾನುಜರು ಮೊದಲಿಯಾಂಡಾನ್ ರವರಿಗೆ ಚೇತನನ ಅನನ್ಯ ಶರಣ್ಯತ್ವವನ್ನು ಪ್ರತಿಪಾದಿಸಿ ಚೇತನನು ಭಗವಂತನಿಗೇ ಅನನ್ಯಾರ್ಹ ಶೇಷೀಭೂತನು, ಇದೇ ಚರಮೋಪಾಯ ಎಂಬುವುದಾಗಿ ಉಪದೇಶ ಮಾಡಿದ್ದಾರೆ ಇದೇ ಎಲ್ಲರಿಗೂ ಮಾರ್ಗದರ್ಶನ ವರ್ತಮಾನ ಮೊದಲಿಯಾಂಡಾನ್ ಆಚಾರ್ಯರು ಶ್ರೀಮಾನ್ ಕೋಯಿಲ್ ಕಂದಾಡೈ ವಾದೂಲದೇಶಿಕ ಅಣ್ಣಾವಿಲಪ್ಪನ್ ಕುಮಾರವೆಂಕಟಾಚಾರ್ಯ ಸ್ವಾಮಿಗಳು ಅವರು ಕಾಂಚೀಪುರ ಹಾಗೂ ಶ್ರೀರಂಗಂ ತಿರುಮಾಳಿಗೆಗಳಲ್ಲಿ ಶಿಷ್ಯರಿಗೆ ಕಾಲಕ್ಷೇಪವನ್ನು ನಿತ್ಯವೂ ನೀಡುತ್ತಿದ್ದಾರೆ ರಾಮಾನುಜರ ಸಿದ್ಧಾಂತವನ್ನು ಪ್ರಚಾರಮಾಡುತ್ತಿದ್ದಾರೆ

|| ಆಚಾರ್ಯನ್ ತಿರುವಡಿಗಳೇ ಶರಣಂ ||



"ಹೌದು, ಲೋಪಾಮುದ್ರೆ ನನ್ನ ಊಹೆ ಸರಿ ಭಗವಾನ್ ಹಯಗ್ರೀವಸ್ವಾಮಿ, ಅಪಾರವಾತ್ಸಲ್ಯದಿಂದ ನನಗೊಂದು ಮಹೋನ್ನತ ಭಿಕ್ಷೆ ನೀಡಿದ್ದಾರೆ"

"ಭಿಕ್ಷೆ ನೀಡಿದ್ದಾರೆಯೆ ? ತಾವು ಕೈಚಾಚಿ ಬೇಡಿದ್ದಾದರೂ ಏನು ? ಭಗವಾನರು ದಯಪಾಲಿಸಿದ ಬಿಕ್ಷೆಯಾದರೂ ಏನೆಂದು ಕೇಳಬಹುದೇ ?"

"ನಾನು ಬೇಡಿದ್ದು ಜ್ಞಾನಬಿಕ್ಷೆ, ಅವರನು ಗ್ರಹಿಸಿದ್ದು ವಿದ್ಯಾಭಿಕ್ಷೆ, ಶ್ರೀವಿದ್ಯಾಭಿಕ್ಷೆ"

"ಶ್ರೀ ವಿದ್ಯಾಬಿಕ್ಷೆ? -- ಇದೇನು ತಮ್ಮ ಮಾತು ವಿಚಿತ್ರವಾಗಿದೆ, ಹೊಸದಾಟಿಯಲ್ಲಿದೆ"

"ಹೌದು ಲೋಪಾಮುದ್ರೆ, ಶ್ರೀವಿದ್ಯೆ ಪರಮರಹಸ್ಯವಾದದ್ದು ಅದು ಜಗತ್ತಿನ ಅತ್ಯಂತ ಶ್ರೇಷ್ಠವಿದ್ಯೆ ಜಗನ್ಮಾತೆಯ ದಿವ್ಯಾನುಗ್ರಹ ಪಡೆಯಲು ನೆರವಾಗುವ ದಿವ್ಯವಿದ್ಯೆ ಐಹಿಕಾಮುಷ್ಮಿಕ ಸಂಪತ್ಸಾದನವಾದ ವಿದ್ಯೆ"

"ಜಗನ್ಮಾತೆಯ ಅನುಗ್ರಹ ಪಡೆಯುವುದೇ ಹಾಗಾದರದೆಂತಹ ಆನಂದ -- ಎಂತಹ ಶ್ರೇಯಸ್ಸು"

"ಲೋಪಾಮುದ್ರೆ -- ಸಕಲ ಚೈತನ್ಯಸ್ವರೂಪಿಣಿಯಾದ ಜಗನ್ಮಾತೆಯನ್ನು -- ಆದ್ಯಾಶಕ್ತಿಯನ್ನು -- ಸಿರಿದೇವಿ ಲಕ್ಷ್ಮಿ ಎಂದರು ವಿದ್ಯಾಸ್ವರೂಪಿಣಿಯಾದ ಆಕೆಯನ್ನು ಸರಸ್ವತಿ - ಎಂದರು ಕಾಮಾಕ್ಷಿ ಎಂದರು ಕಂಜಲೋಚನಿ ಎಂದರು ಇಚ್ಛಾ ಜ್ಞಾನ ಶಕ್ತಿ ಸ್ವರೂಪಿಣಿ ಎಂದರು ಸತ್ಯ ಒಂದು ಹೆಸರು ಹಲವು.

"ಭಗವನ್ -- ಆಗಮ ವಿಪಿನ ವಿಹಾರಿಣಿಯಾದ ಜಗನ್ಮಾತೆಯನ್ನು ಸಾಕ್ಷಾತ್ಕರಿಸಿಕೊಂಡವರುಂಟೆ ?"

"ಅದಕ್ಕಾಗಿ ಪ್ರಯತ್ನ ಮಾಡಿದವರು ಬಹುಮಂದಿ ಆ ಪ್ರಯತ್ನವೇ ಒಂದು ಬಗೆಯ ದಿವ್ಯಾನುಭವ ದಿವ್ಯಾನುಭವದ ಒಂದೊಂದು ಕ್ಷಣವೂ ಸಿದ್ಧಿಗಿರಿಯ ಆರೋಹಣದಲ್ಲಿ ಒಂದೊಂದು ಮೆಟ್ಟಿಲು -- ಭಕ್ತಿ ಸಿದ್ಧೇರ್ಗರೀಯಸೀ -- ಎಂಬಂತೆ ಹಂತಹಂತವಾಗಿ ನಡೆಯುವ ಈ ಪ್ರಯತ್ನವೇ ಚೆನ್ನ"

"ಹಾಗಾದರೆ ಸಿದ್ಧಿ -- ಎನ್ನುವುದೇನು ?"

"ನಾವೇ ಸಕ್ಕರೆಯಾಗುವುದು ಸಿದ್ಧಿ ಸಕ್ಕರೆಯನ್ನು ಸವಿಯುತ್ತ ಹೋಗುವುದು ಸಾದನೆ ಸಕ್ಕರೆಗೇನು ಗೊತ್ತು ತನ್ನ ಮಾದುರ್ಯ ? ತಿಂದವನಿಗೆ ಗೊತ್ತು

# ಶ್ರೀಮಾತೆ-ಲಲಿತೆ

ಬ ನ.ಗುಂಡೂರಾವ್

ಅದರ ರುಚಿ ಮಾಧುರ್ಯ -- ಅಲ್ಲವೇ ಲೋಪಾಮುದ್ರೆ ?"

"ಹಾಗಾದರೆ ಶ್ರೀವಿದ್ಯೆ ಎನ್ನುವುದೊಂದು ರೀತಿಯ ಸಾಧನೆಯೇನು ?" ಅಷ್ಟರಲ್ಲಿ ಸಂಧ್ಯಾ ಸಮಯವಾಯ್ತು ಭಗವಾನ್ ಅಗಸ್ತ್ಯರು ಸ್ನಾನಾಹ್ನಿಕಕ್ಕೆ ಹೊರಡಲನುವಾದರು"

"ನನ್ನ ಪ್ರಶ್ನೆಗುತ್ತರ ?"

ಲೋಪಾಮುದ್ರ ವಿನಯದಿಂದ ಕೇಳಿದಳು

"ಅವಕಾಶವಾದಾಗ" -- ಎನ್ನುತ್ತ ಅಗಸ್ತ್ಯರು ವಲ್ಕಲವಸ್ತ್ರದಂಡ ಕಮಂಡಲಗಳನ್ನು ಹಿಡಿದು ಸ್ನಾನಕ್ಕಾಗಿ ಹೊರಟರು ಲೋಪಾಮುದ್ರೆ ಅವರ ಗಂಭೀರಗತಿಯನ್ನೇ ಗಮನಿಸುತ್ತ ಆಶ್ರಮದ್ವಾರದಲ್ಲಿ ನಿಂತಳು -- ಅವರ ಒಂದೊಂದು ಹೆಜ್ಜೆಯೂ ವಿಚಿತ್ರ ಹಾಗೂ ... ಇರುವುದ ಎಂದು ಯೋಚಿಸುತ್ತ -

ಭಗವಾನ್ ಭಾಸ್ಕರನಿಗೆ ಅರ್ಘ್ಯವಿತ್ತು ಅಗಸ್ತ್ಯರು ನದೀತೀರದಲ್ಲಿ ಕುಳಿತಿದ್ದಾರೆ ದಾವಿಂಗ ಸಮಯವಾದ್ದರಿಂದ ನದಿ ಹಾಲುಹೊಳೆಯಾಗಿದೆ ಚಂದ್ರಿಕಾಸ್ನಾತರಜನಿಯಲ್ಲಿ ಎಲ್ಲಕಡೆ ಗುಂಪಾರವ ಕ್ರಮೇಣ ಕಡಿಮೆಯಾಗುತ್ತಿದೆ ಪ್ರಕೃತಿಮಾತೆ ತನ್ನ ಮಗುವಿಗೆ ರಜತ ಬಿಳಿ ವಸ್ತ್ರವನ್ನು ಹೊದಿಸಿದ್ದಾಳೆ

ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ - ಜಗತ್ತೆಲ್ಲ ಜಡನಿದ್ರೆಯಲ್ಲಿರುವಾಗ ಯೋಗಿ - ಋಷಿ - ಎಚ್ಚತ್ತು ಕುಳಿತಿರುತ್ತಾನೆ ಬಹುಶ ಆ ಪ್ರಶಾಂತವಾತಾವರಣ ಸಚ್ಚಿಂತನೆಗೆ ಸಹಕಾರಿಯಾಗುತ್ತದೆ ಮಹಾಮೌನದಲ್ಲಿ ಮಹತ್ತರ



ಆಲೋಚನಾ ಲಹರಿಗಳು, ಮನೀಷಿಗಳ ಪ್ರಜ್ಞಾ ಚಕ್ಷುವಿನ ಮುಂದೆ ಆಕಾರ ತಾಳಿ ಬರುತ್ತವೆಂದು ಒಲ್ಲವರು ಹೇಳುತ್ತಾರೆ ವಾತಾವರಣೋದ್ದಿಪಿತಾಂತ ಕರಣನಾದ, ಅಗಸ್ತ್ಯ -- ನೀಲಾಕಾಶದಲ್ಲಿ ತೇಲಾಡುವ ಚಂದ್ರಬಿಂಬವನ್ನು ದಿಟ್ಟಿಸಿ ನೋಡುತ್ತಿದ್ದಾನೆ ಸೃಷ್ಟಿಯ ಈ ರಮ್ಯಾದ್ಭುತವನ್ನು ನೋಡುತ್ತಿದ್ದಂತೆ - ಆತನಿಗೊಂದು ಮಾತು ನೆನಪಾಯ್ತು

ಪೌರ್ಣಮಾಸ್ಯಾಂ ಚಂದ್ರಬಿಂಬೇ
ಧ್ಯಾತ್ವಾ ಶ್ರೀ ಲಲಿತಾಂಬಿಕಾಮ್,
ಕೀರ್ತಯೇನ್ನಾಮ ಸಾಹಸ್ರಂ
ಪೌರ್ಣಮಾಸ್ಯಾಂ ವಿಶೇಷತ

ನಮ್ಮ ಹಿರಿಯರು ದೇಶವನ್ನು ತಾಯಿ ಎಂದರು ನದಿಯನ್ನು ತಾಯಿ ಎಂದರು - ದೇವರನ್ನೂ ತಾಯಿ ಎಂದರು ತಾಯಿಯನ್ನೇ ದೇವರು -- ಎಂದರು ಬ್ರಹ್ಮವಸ್ತುವನ್ನು ಅನುಭವೈಕವೇದ್ಯ ಎಂದರು ನಿಜ ಧ್ಯಾನಗೋಚರ ಎಂದರು ಇದೂ ನಿಜ ಮಗುವಿನ ನಗುವಿನಲ್ಲಿ -- ಹೂವಿನ ಸೌಕುಮಾರ್ಯದಲ್ಲಿ -- ಹಾರುವ ಹಕ್ಕಿಯಲ್ಲಿ -- ಹರಿಯುವ ನೀರಿನಲ್ಲಿ -- ಬೆಳಗುವ ಸೂರ್ಯ ಚಂದ್ರರಲ್ಲಿ -- ಕುಣಿವ ನವಿಲಿನ ವೈಖರಿಯಲ್ಲಿ -- ಬೆಳೆದು ನಿಂತ ಬೆಳೆಯಲ್ಲಿ ಎಲ್ಲದರಲ್ಲೂ ದೇವರನ್ನು ಕಂಡ ಭಾರತೀಯರು ಸೌಂದರ್ಯೋಪಾಸಕರಲ್ಲವೆಂದು ಯಾರೂ ಹೇಳಲಾಗದು

ಈ ಶಾವಾಸ್ಯಮಿದಂ ಸರ್ವಂ -- ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿ ವಾಕ್ಯಗಳು ಇಂದು ಕೇವಲ ವಾಕ್ಯಗಳಾಗೇ ಉಳಿದುಕೊಂಡದ್ದು ನಮ್ಮ ದೌರ್ಭಾಗ್ಯ ಆದರೆ ತಪೋಲೀನ -- ಧ್ಯಾನಲೀನ ಪುಣ್ಯಚೇತನಗಳಿಗೆ ಇವು ವಾಕ್ಯಗಳಲ್ಲ -- ಜೀವಂತ ಸತ್ಯ ಸತ್ಯದರ್ಶಿಗಳಾದ ಋಷಿಕವಿಗಳು ಋತಚಿನ್ಮಯಿತತ್ವವನ್ನು ಕಾವ್ಯಮಯವಾಗಿ ಬಣ್ಣಿಸಿದರು ಗೋಪುರೋಪಮವಾಗಿ ಚಿತ್ರಿಸಿದರು ಈ ತತ್ವ ಲೋಚನಗೋಚರವಾಗುವಂತೆ ಕಮನೀಯ ವರ್ಣನೆ ಮಾಡಿದರು ಋಷಿಮುನಿಗಳು ತಾವು ಕಂಡ ಸತ್ಯಕ್ಕೆ ಸೌಂದರ್ಯದ ರೂಪಕೊಟ್ಟು ಸುಮ್ಮನಾಗಲಿಲ್ಲ ಅದಕ್ಕೊಂದು ಹೆಸರಿಟ್ಟರು ಏಕೆ ? ಜನಕ್ಕೆ ಕಾಣಲೆಂದು ಸ್ವತ ಕಂಡಾಗಲೇ ಮಹತ್ವದರಿವಾಗುವುದು ಕಾಣುವ ರೂಪ ಸುಂದರವಾಗಿರಬೇಕೆಂದು ನಾವು ಬಯಸುತ್ತೇವೆ ಇದೇ ಸಗುಣೋಪಾಸನೆಯ ತತ್ವ, ಅದರ ಹಿಂದಿರುವ ರಹಸ್ಯ

ಚಂಪಕಾಶೋಕ ಪುನ್ನಾಗ
ಸೌಗಂಧಿಕ ಲಸತ್ಕಚಾ
ನವ ಚಂಪಕ ಪುಷ್ಪಾಭ
ನಾಸಾದಂಡ ವಿರಾಜಿತಾ
ಕರ್ಪೂರ ವೀಟಿಕಾಮೋದ
ಸಮಾಕರ್ಷದ್ದಿಗಂತರಾ
ರತ್ನ ಕಿಂಕಿಣಿಕಾ ರಮ್ಯ
ರಶನಾ ದಾಯ ಭೂಷಿತಾ
ಶ್ರುತಿ ಸೀಮಂತ ಸಿಂದೂರೀಕೃತ
ಪಾದಾಬ್ಜಮದೂಳಿಕಾ
ಕನಕಾಂಗದ ಕೇಯೂರ ಕಮನೀಯ
ಭುಜಾನ್ವಿತಾ

ಈ ವಾಕ್ಯಗಳನ್ನೋಡಿದಾಗ ನಮ್ಮ ಮನೋರಂಗದಲ್ಲಿ ಯಾವುದೋ ಒಂದು ಸುಂದರ ಚಿತ್ರ ಮೂಡುತ್ತದೆ ಯಾರು ಈ ಸೌಂದರ್ಯರಾಶಿ ? ಯಾರೀ ದಿವ್ಯಾಲಂಕೃತ ವ್ಯಕ್ತಿ ? ಆಕೆಯನ್ನು ಶ್ರೀಮಾತಾ ಎಂದರು ಶ್ರೀ ಲಲಿತಾ ಎಂದರು ಭಕ್ತಿಗಮ್ಯಾ ಎಂದರು ಭಾವನಾಗಮ್ಯಾ -- ಎಂದರು -- ವೇದ ಜನನಿ -- ಎಂದರು -- ಶಾಂತಿಮತೀ -- ಎಂದರು ತಟಿಲ್ಲತಾಸಮ ರುಚಿ ಎಂದರು ಈ ಒಂದೊಂದು ಮಾತೂ ಧ್ವನಿ ಪೂರ್ಣವಾಗಿದೆ ಈಕೆ ಇರುವುದೆಲ್ಲಿ ಹೃದಯಸ್ಥಾ -- ಎಂದರು ಹೃದಯದಲ್ಲಿರುತ್ತಾಳೆ, ಯಾರ ಹೃದಯದಲ್ಲಿ ? ಎಲ್ಲ ಜೀವಿಗಳ ಹೃದಯದಲ್ಲಿ ಈಕೆಗೆ ವಯಸ್ಸೆಷ್ಟು ? ವಯೋಽವಸ್ಥಾವಿವರ್ಜಿತಾ -- ಎಂದರು ಹಾಗಿದ್ದರೆ ಆಕೆ ಚಿರಯೌವನಿ -- ಎಂದಿಗೂ ಮಾಸದ ಸೌಂದರ್ಯ ಈಕೆಯನ್ನು ಕಾಣುವುದು ಹೇಗೆ ? ವಾತ್ಸಲ್ಯದ ರೂಪದಲ್ಲಿ ಶ್ರದ್ಧೆಯ ರೂಪದಲ್ಲಿ -- ಬುದ್ಧಿಯ ರೂಪದಲ್ಲಿ ಚೈತನ್ಯದ ರೂಪದಲ್ಲಿ -- ತಾಯಿಯ ರೂಪದಲ್ಲಿ

ಯಾ ದೇವೀ ಸ..ಭೂತೇಷು
ಮಾತೃರೂಪೇಣ ಸಂಸ್ಥಿತಾ
ಯಾ ದೇವೀ ಸರ್ವಭೂತೇಷು
ಶ್ರದ್ಧಾರೂಪೇಣ ಸಂಸ್ಥಿತಾ
ಯಾ ದೇವೀ ಸರ್ವಭೂತೇಷು
ಬುದ್ಧಿರೂಪೇಣ ಸಂಸ್ಥಿತಾ
ಯಾ ದೇವೀ ಸರ್ವಭೂತೇಷು
ಚೇತನೇತ್ಯಭಿಧೀಯತೇ

ಆಕೆ ಯಾರು ಎಂದಾಗ ನಮ್ಮ ತಾಯಿ ಎನ್ನುತ್ತೇವೆ ಆಕೆಯ ಹೆಸರೇನು ಎಂದಾಗ ಆಕೆಯ ಹೆಸರು ಇಂದದು -- ಎಂದು ಹೇಳುತ್ತೇವೆ ಇದೇ ಮಾತು ಇಲ್ಲಿಗೂ ಅನ್ವಯಮಾಡಬಹುದು

ಆಕೆ ಯಾರು -- ಶ್ರೀಮಾತಾ !!
ಆಕೆಯ ಹೆಸರೇನು -- ಶ್ರೀ ಲಲಿತಾ !!
ಆಕೆಯ ಸ್ವಭಾವವೇನು -- ಸ್ವಭಾವಮಧುರಾ
ಆಕೆಯ ವಾತ್ಸಲ್ಯ ಎಂತಹುದು ?
-- ಅವ್ಯಾಜಕರುಣಾಮೂರ್ತಿ
ಆಕೆಯನ್ನೆಲ್ಲರೂ ಕಾಣಬಹುದೇ ?
-- ಹೌದು -- ಆಬಾಲಗೋಪವಿದಿತಾ
ಆಕೆ ಬೇಗ ಒಲಿದಾಳೇನು ?
-- ಖಂಡಿತ ಕ್ಷಿಪ್ರಪ್ರಸಾದಿನಿ
ಆಕೆ ಯಾರ ತಾಯಿ ? -- ವಿಶ್ವಮಾತಾ
ಆಕೆ ಸೌಮ್ಯಳೋ -- ಭೀಕರಳೋ ?
ಎರಡೂ -- ಭೈರವೀ ರುದ್ರರೂಪಾ
ರಮ್ಯಾ ರಾಜೀವಲೋಚನಾ

ಆಕೆಯನ್ನರಿಯಲು ಸಾಂಖ್ಯಮಾರ್ಗ ಸರಿಯೆ ? ವೈಶೇಷಿಕಮಾರ್ಗ ಸೂಕ್ತವೇ ? ಯೋಗ ಮಾರ್ಗ ಸೂಕ್ತವೇ ? ಆಕೆ ಷಡಧ್ವಾತೀತ ರೂಪಿಣಿ -- ಷಡ್ದರ್ಶನಗಳಿಗೆ ಮೀರಿದವಳು ಮನಸ್ಸಿಗೂ ವಾಕ್ಕಿಗೂ ಸಿಕ್ಕುವಳಲ್ಲ -- ಮನೋವಾಚಾಮಗೋಚರಾ !!

ಶ್ರೀಮಾತೆ ಲಲಿತೆ ಪಂಚಕೋಶಾಂತರಸ್ಥಿತೆ -- ಇದು ತುಂಬ ಗಂಭೀರವಾದ ಮಾತು ಅನ್ನಮಯ

## ಪ್ರಕಟಣೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್‌ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸ ಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ ೬ ಗಂಟೆಯಿಂದ ಸಂಜೆ ೬ ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು

-- ಪ್ರಾಣಮಯ -- ಮನೋಮಯ - ವಿಜ್ಞಾನಮಯ -- ಆನಂದಮಯ -- ಈ ಐದು ಕೋಶಗಳ ಪ್ರಸ್ತಾಪ ಭಾರತೀಯ ವೇದಾಂತದಲ್ಲಿ ಒಂದು ಪ್ರಮುಖ ಅಂಶ ಜೀವಿಯ ಅಧ್ಯಾತ್ಮಯಾತ್ರೆಯಲ್ಲಿ ಇವು ಒಂದೊಂದು ಹಂತ ಪಯಣ ಪ್ರಾರಂಭವಾಗುವುದು ಅನ್ನಮಯಕೋಶದಿಂದ, ಮುಕ್ತಾಯ ಆನಂದಮಯಕೋಶದಲ್ಲಿ ಚೈತನ್ಯಸ್ವರೂಪಿಣಿಯಾದ ಶ್ರೀ ಲಲಿತೆ ಈ ಪಂಚಕೋಶಗಳಲ್ಲಿದ್ದು ನಮ್ಮ ಜೀವನಯಾತ್ರೆಗೆ ಆಯಾ ಹಂತದಲ್ಲಿ ಪುಷ್ಟಿ ಕೊಡುತ್ತಾಳೆ ಆಕೆ ಅಲ್ಲಿರುವುದರಿಂದಲೇ ಆಯಾ ಕೋಶಗಳ ಚಟುವಟಿಕೆ

ಅಗಸ್ತ್ಯರು ಶ್ರೀ ಮಾತೆಯ ಬಗ್ಗೆ ಕೊಟ್ಟ ವಿವರಣೆ ಕೇಳಿ ಲೋಪಾಮುದ್ರೆ ಆನಂದತುಂದಿಲಳಾದಳು ಸಚ್ಚಿದಾನಂದ ರೂಪಿಣಿಯನ್ನು ಧ್ಯಾನಿಸಿ - ಪೂಜಿಸಿ -- ಧನ್ಯಳಾದಳು ಆದ್ದರಿಂದಲೇ ಶ್ರೀದೇವಿಯನ್ನು -- ಲೋಪಾಮುದ್ರಾರ್ಚಿತಾ ಎಂದು ಕೊಂಡಾಡಿದ್ದಾರೆ

ಬ್ರಹ್ಮಾಂಡ ಪುರಾಣಾಂತರ್ಗತವಾದ ಲಲಿತಾ ಸಹಸ್ರನಾಮ, ತಂತ್ರಶಾಸ್ತ್ರದಲ್ಲಿ ಪ್ರಮುಖಸ್ಥಾನ ಪಡೆದಿದೆ ಇದಕ್ಕೆ ಅನೇಕ ಹಿರಿಯರು ಅರ್ಥವಿವರಣೆ ಕೊಟ್ಟು ಭಾಷ್ಯಗಳನ್ನು ರಚಿಸಿದ್ದಾರೆ

ಒಮ್ಮೆ ಹೂದೋಟದಲಿ ಒಮ್ಮೆ ಕೆಳೆಕೂಟದಲಿ
ಒಮ್ಮೆ ಸಂಸಾರದಲಿ ಒಮ್ಮೆ ಶಾಸ್ತ್ರದಲಿ
ಒಮ್ಮೆ ಸಂಗೀತದಲಿ ಮತ್ತೊಮ್ಮೆ ಲೋಕದಲಿ
ಬ್ರಹ್ಮಾನುಭವಿಯಾಗು -- ಮಂಕುತಿಮ್ಮ

ಲೋಕವ್ಯವಹಾರವನ್ನು ತಿರಸ್ಕರಿಸುವಂತಿಲ್ಲ ಪ್ರಾಚೀನ ಮೌಲ್ಯಗಳಿಗೆ ಪುರಸ್ಕಾರ ಕೊಡದೇ ಇರಲು ಸಾಧ್ಯವಿಲ್ಲ ಎರಡನ್ನು ಸಮಸಮನೆ ನಿಭಾಯಿಸಿಕೊಳ್ಳುವುದೆಂತು - ಇದೇ ಬಾಳಿನಲ್ಲಿ ನಾವು ಕಲಿಯಬೇಕಾದ ಪಾಠ ಜನ ತೋಟಕ್ಕೆ ಹೋಗುತ್ತಾರೆ ದೇವಾಲಯಕ್ಕೆ ಹೋಗುತ್ತಾರೆ ಸಿನೆಮಾಕ್ಕೆ ಹೋಗುತ್ತಾರೆ ಕ್ಲಬ್‌ಗೆ ಹೋಗುತ್ತಾರೆ ಈ ಮಧ್ಯೆ ಬಿಡುವು ಮಾಡಿಕೊಂಡು ದಿನಪತ್ರಿಕೆ ಓದುತ್ತಾರೆ -- ಸ್ನೇಹಿತರ ಮನೆಗೆ ಹೋಗುತ್ತಾರೆ ಕಾರ್ಯ ನಿಮಿತ್ತ ಬೇರೆ ಊರುಗಳಿಗೂ ಹೋಗುತ್ತಾರೆ ಅಂಗಡಿಗೆ ಹೋಗಿಬರುವುದೂ ಉಂಟು ಇಷ್ಟೆಲ್ಲ ಕಾರ್ಯಭಾರಗಳನ್ನು ನಿರ್ವಹಿಸುವಾಗ -- ಈ ಮಧ್ಯೆ ಸ್ವಲ್ಪ ಸಮಯವನ್ನು ಸಚ್ಚಿಂತನೆಗೆ ಅವಕಾಶಮಾಡಿಕೊಳ್ಳುವುದು ಕಷ್ಟವೇನೂ ಆಗಲಾರದು ಇಷ್ಟು ಇರಬೇಕು ಅಷ್ಟೆ ! ಕಾಲ ಹೇಗೂ ಕಳೆದೇಹೋಗುತ್ತದೆ ಆದರೆ ಬ್ರಹ್ಮಾನುಭವದಿಂದ ಕಾಲ ಕಳೆದರೆ ಸುಖ ಎಂದು ಮೇಲಿನ ಪದ್ಯದ ಇಂಗಿತ ಎಲ್ಲದರಲ್ಲೂ ಬ್ರಹ್ಮಾನುಭವ ಸಾಧ್ಯವೇ ? ಖಂಡಿತ ಸಾಧ್ಯ ಇಷ್ಟವಿದ್ದಾಗ ಅರಳಿನಿಂತು, ಸುಕುಮಾರ ನಯನದಳಗಳನ್ನು ಪಿಳಿಪಿಳಿ ಆಡಿಸುತ್ತ ಸೌರಭ ಸೂಸುವ ಹೂಗಳನ್ನು ಕಂಡಾಗ ಸ್ವಲ್ಪ ಯೋಚನೆ ಮಾಡೋಣ -- ದೇಠಿನ ಬಣ್ಣವೇನು ಮಣ್ಣಿನ ಬಣ್ಣವೇನು ಎಲೆಗಳ ಬಣ್ಣವೇನು -- ಹೂವಿನ ಬಣ್ಣವೇನು ?? ಸೂರ್ಯ ಕಿರಣ ಒಂದೇ ಅದರ ಬೇರು ತನಗೆ ಬೇಕಾದನ್ನು -- ಹೂ ತನಗೆ ಬೇಕಾದನ್ನು - ಎಲೆ ತನಗೆ ಬೇಕಾದ್ದನ್ನು ಒಂದೇ ಕಿರಣದಿಂದ ಪಡೆಯುತ್ತದೆ ಇದೆಂತಹ ರಸಗ್ರಹಣ ವೈಖರಿ ?? ಯಾರದೀ ತಂತ್ರ ?? ಸಂಗೀತ ಕೇಳಿದಾಗ -- ರಸಿಕನ ಮನಸ್ಸಿನಲ್ಲಿ ಅದೆಂತಹ ಪರಿಣಾಮವಾಗುತ್ತದೆ? ರಾಗಲಹರಿಗಳಲ್ಲಿ ತೇಲಿಬರುವ ಭಾವ - ಭಕ್ತಿ -- ಸೌಂದರ್ಯಗಳು ಅವನನ್ನೇಕೆ ಪುಲಕಿತಗೊಳಿಸುತ್ತವೆ ? ಭೂಮಾತೆಯ ಶ್ಯಾಮಲಾಂಚಲದಂತೆ ಮೆಲ್ಲಗೆ ಅಲುಗಾಡುತ್ತ ನಿಂತಿರುವ ಪೈರುಪಚ್ಚೆ ಕಂಡಾಗ - ನಾವು ನೆಟ್ಟ ಒಂದು ಕಾಳು ಪೈರಾಗಿ ಬೆಳೆದು ತನ್ನಲ್ಲಿ ಸಾವಿರಾರು ಕಾಳುಗಳನ್ನಡಗಿಸಿಕೊಂಡಿದೆ -- ನೆಟ್ಟ ಒಂದು ಕಾಳಿನಲ್ಲಿ ಅದೆಂತಹ ಅದ್ಭುತ ಶಕ್ತಿ ಇತ್ತು ? ಆದರೆ ಆ ಕಾಳೇನಾಯ್ತು ? ಇತ್ಯಾದಿ ಯೋಚನೆಗಳು ಬಂದಾಗ ಸೃಷ್ಟಿಯ ಹಿಂದಿರುವ ಶ್ರೀಮಾತೆಯ ಕಲಾತ್ಮಕ ಕೈವಾಡ -- ದೈವಶಕ್ತಿಯ ವೈಚಿತ್ರ್ಯ -- ಮಹಿಮೆ -- ವೈಭವಗಳು -- ನಮ್ಮ ಆಲೋಚನಾ ಲಹರಿಯನ್ನೇ ಬೇರೆದಿಕ್ಕಿಗೆ ಬದಲಾಯಿಸಲು ಸಾಧ್ಯವಿದೆ

ಅತ್ಯಂತ ಬುದ್ಧಿವಂತನೆಂದು ತನ್ನನ್ನು ತಾನೇ ಭಾವಿಸಿಕೊಂಡಿರುವಾತ, ಅತ್ಯಂತ ಶ್ರೀಮಂತ -- ಅತ್ಯಂತ ದೊಡ್ಡ ವ್ಯವಹಾರವನ್ನು ಕಟ್ಟಿಕೊಂಡಿರುವ ಅಧಿಕಾರಿ ಇವರೆಲ್ಲರೂ ದೊಡ್ಡ ಅಶಾಂತಿಗೆ ಗುರಿಯಾಗಿರುತ್ತಾರೆ ಭೌತಿಕವಾದ ಎಲ್ಲ ಭಾಗ್ಯವೂ ಇದ್ದರೂ ಈ ಅಶಾಂತಿ ಏಕೆ ? ಇದು ನಮ್ಮನ್ನು ಕಾಡುತ್ತಿರುವ ಪ್ರಶ್ನೆ ಅನೇಕತತ್ವಗಳು ತಲೆಕೆಡಿಸಿದ್ದು ಸಾಕು ಒಂದು ತತ್ವದಲ್ಲಿ ಶ್ರದ್ಧಾಭಕ್ತಿ ಬೆಳೆದರೆ ಸಾಕು -- ಎಂಬ ಅರಿವು ಮೂಡಬೇಕಾಗಿದೆ ಮಾನವೀಯ ಮೌಲ್ಯಗಳ ಸ್ಪಷ್ಟ ಚಿತ್ರ ಕಾಣಬೇಕಾಗಿದೆ ಜಗತ್ತಿನ ತೊಂಭತ್ತೊಂಭತ್ತು ಭಾಗ ವ್ಯವಹಾರವೆಲ್ಲ ಮಾನವನ ಮನೋಭೂಮಿಕೆಯ ಚೌಕಟ್ಟಿನಲ್ಲೇ ನಡೆಯುತ್ತದೆ ಅದು ನಿರ್ಮಿಸುವ ಅಂದಚೆಂದದ ವಾತಾವರಣದಲ್ಲೇ ಆಯುಷ್ಯದ ಬಹುಭಾಗ ಕಳೆಯುತ್ತದೆ ವ್ಯಕ್ತಿ ಈ ಸ್ಥಿತಿಗೆ ಅತೀತನಾದಾಗ - ಮನಸ್ಸೇ ಸರ್ವಸ್ವವಲ್ಲ -- ಅದನ್ನಾಳುವ ಬೇರೊಂದು ಶಕ್ತಿ ಇದೆ ಎಂಬ ಅರಿವು ಮೂಡುತ್ತ ಬಂದಂತೆಲ್ಲ -- ಮೋಡ ಸರಿದು ಬೆಳಕು ಕಾಣುತ ಬರುತ್ತದೆ ಮನಸ್ಸು ಮಾತ್ರವಲ್ಲ ಬುದ್ಧಿಯೂ [illegible] ಆಳವ [illegible] ಅವನ್ನು ಶ್ರೀ ಮಾತಾ ಶ್ರೀ ಲಲಿತಾ [illegible] ಇದನ್ನರಿಯುವುದ ಆತ್ಮವಿದ್ಯಾ [illegible] ಶ್ರೀವಿದ್ಯಾ ರಹಸ್ಯವಿದ್ಯಾ [illegible] ವಾಗಿರುವ ಜಗತ್ತಿಗೆ ಆಕೆ ವಿಶ್ವಾಂ[illegible] ಸ್ವಾಳೆಂದಾಗ ಆ ಜಗನ್ಮಾತೆಯ [illegible] ಹರಿಸದ ಕಾದ್ದು ಅತ್ಯಗತ್ಯ ಶ್ರೀ [illegible] ಮಾಡಿದಷ್ಟೂ ಶ್ರೀ ಮಾತೆಯ ಸ್ವರೂಪ [illegible] ತ್ತದೆ ಆಕೆ ಕಾರ್ಯಕಾರಣ [illegible] ಕಾರ್ಯಕಾರಣ ನಿಯುಕ್ತಾ [illegible]

ಸುಮಾರು ೧೪೩ - ೧೮ [illegible] ಅಡಕವಾಗಿರುವ ಶ್ರೀ ಲಲಿತಾಸಹಸ್ರನಾಮ [illegible] ಕಾವ್ಯ ಸೌಂದರ್ಯವಿದೆ - ನಾದಸೌಂದರ್ಯವಿದ ಭಾವ ಗಾಂಭೀರ್ಯವಿದೆ [illegible] ವಿದೆ ಆನಂದವಿದೆ - ರೂಪಸೌಂದರ್ಯವಿದ ಸಂಗೀತ ಸಾಹಿತ್ಯಾದಿ ಸಕಲ ಕಲೆಗಳೂ [illegible] ದಲ್ಲಿ ಶೋಭಿಸುವ ಮಣಿಮಾಲ [illegible] ಆಕೆಯನ್ನು - ಕಲಾಮಾಲಾ - ಎಂದರು

ಇಂದಿನ ಜಗತ್ತು ಬುದ್ಧಿಶಕ್ತಿಯನ್ನು ಬೆಳೆಸಿಕೊಂಡಿದೆ -- ಹೃದಯಸಂಪನ್ನತೆ ಬೆಳೆಸಿಕೊಳ್ಳ[illegible] ಹೃದಯದ ಭಾವನೆಗಳು ದೈವೀಭಾವನೆ[illegible] ಬೇಕು ಹಾಗಾಗಬೇಕಾದರೆ ಶ್ರದ್ಧಾಭಕ್ತಿ [illegible] ಬೇಕು ಸಸ್ಯಕ್ಕೆ ಉಣಿಸಿದ ನೀರು ಹಾಗೂ ಪೌಷ್ಟಿಕಾಂಶದ ಸಮಗ್ರಫಲಿತಾಂಶವೇ ನಮಗೆ ಗಿಡದಲ್ಲಿ ಸಿಕ್ಕುವ ಹೂ -- ಹಣ್ಣು ಇದು ವೈಜ್ಞಾನಿಕ ಸತ್ಯ ಇದೇರೀತಿ, ಗಳಿಸಿಕೊಂಡ ಶುಭ ಸಂಸ್ಕಾರ, ಒಳ್ಳೆಯದಾದ ಸತ್ಸಾಂಗತ್ಯ ಇವೆಲ್ಲದರ ಸಮಗ್ರಫಲಿತಾಂಶವೇ ಹೃದಯದ ದೈವೀಭಾವನಗಳು ಇವುಗಳ ಪ್ರಕಟ ರೂಪವೇ ಭಕ್ತಿ ತತ್‌ಫಲವೇ ಶ್ರೀಮಾತೆಯ ಅನುಗ್ರಹ ಎಂಬ ಅಭಿಪ್ರಾಯ ಹೇಗೆತಾನೆ ಅಪ್ರಜ್ಞಾನಿಕವಾದೀತು

ಈ ಜಗನ್ಮಾತೆಯನ್ನೇ ಕವಿಕುಲ ತಿಲಕ ಪೋತನಾಮಾತ್ಯ ಮುಕ್ತಕಂಠದಿಂದ ಹೀಗೆ ಸ್ಮರಿಸಿದ್ದು -

ನವಾಂಬು ಜೋಜ್ವಲ ಕರಾಂಬುಜ ಶಾರದ
ಚಂದ್ರ ಚಂದ್ರಿಕಾಡಂಬರ ಚಾರು ಮೂರ್ತಿ
ಪ್ರಕಟಸ್ಫುಟ ಭೂಷಣ ರತ್ನ ದೀಪಿಕಾ
ಚುಂಬಿತ ದಿಗ್ವಿಭಾಗ
ಭಾವಾಂಬರ ವೀಧಿ ವಿಶ್ರುತ್ ವಿಹಾರಿಣೀ ||

|| ನಮಾಮಿ ಲಲಿತಾಂ ನಿತ್ಯಾಮ್ ||



ಸಂದರ್ಶಿಸಿ

ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾದನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯವಿಶೇಷಗಳೂ, ತಿ ತಿ ದೇ ಮತ್ತಿತರ ಕಡೆಗಳಲ್ಲಿ ದೊರೆತ ಆಯುದಗಳೂ ಪ್ರದರ್ಶಿತವಾಗಿವೆ ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್ ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದ

ಶಿಲ್ಪಶಾಸ್ತ್ರ ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ

ವಿಗ್ರಹಗಳು ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ

ಆಳ್ವಾರ್‌ಗಳು ವಿಶಿಷ್ಟಾದ್ವೈತ ತತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾದಿಸುತ್ತಿದ್ದರು

ಸಮಯಾಚಾರಗಳು ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ

ಕಲೆ ಹರಿದಾಸರ ಹಿರಿಮೆಯನ್ನೂ ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ಅನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ

---

ಕಾಲ ಬೆಳಗ್ಗೆ ೮ ರಿಂದ

ರಾತ್ರಿ ೮ ರ ವರೆಗೆ

ಟಿಕೆಟ್ ರೂ ೧--೦೦ (ಹಿರಿಯರಿಗೆ)

„ „ ೦--೫೦ (ಕಿರಿಯರಿಗೆ)



# ಕಲಶದೇವತೆ



---ಸುಮಿತ್ರಾ ಶಾನಭಾಗ.

ಪರಶುರಾಮ ಕ್ಷೇತ್ರವೆಂದು ಕರೆಯಲ್ಪಡುವ ಕರ್ನಾಟಕ ರಾಜ್ಯದ ಕರಾವಳಿಯ ಉತ್ತರ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳು ದೈವ, ಭೂತ, ನಾಗ ಮೊದಲಾದ ದೇವತೆಗಳ ಆರಾಧನೆಗೆ ಪ್ರಸಿದ್ಧವಾಗಿವೆ 'ಭೂತ' ಎಂದರೆ ಹಿಂದೆ ಇದ್ದುದು, ಹಿಂದೆ ಇದ್ದವರು, ಹಿಂದೆ ನಡೆದುದು ಎಂದು ಅರ್ಥಗಳಿವೆ ವಿಶೇಷವಾಗಿ ಯಾವುದಾದರೂ ಒಂದು ಆಸೆಯನ್ನು ಇಟ್ಟುಕೊಂಡು ಮಡಿಯುವವರ ಆತ್ಮಗಳು ಆ ಆಸೆಯನ್ನು ಈಡೇರಿಸಿಕೊಳ್ಳುವ ಸಲುವಾಗಿ ಭೂತಗಳಾಗುವವೆಂಬ ನಂಬಿಕೆ ಇವು ದೇವತ್ವವನ್ನು ಪಡೆಯುವದರಿಂದ ಇವುಗಳಿಗೆ ದೈವ್ವಗಳೆಂದೂ ಹೇಳುವರು

ಬೇರೆ ಬೇರೆ ಪ್ರದೇಶಗಳಲ್ಲಿ ಅಲ್ಲಲ್ಲಿಯ ಸಂಪ್ರದಾಯದಂತೆ ಅನೇಕ ಬಗೆಯ ದೈವ ಭೂತಾದಿಗಳನ್ನು ಪೂಜಿಸುವರು ಯುದ್ಧದಲ್ಲಿ ಮಡಿದ ವೀರರ ಶಿಲಾಮೂರ್ತಿಗಳು ಒಂದು ವರ್ಗಕ್ಕೆ ಸೇರುತ್ತವೆ, ಅವುಗಳಿಗೆ ಬೀರ, ಜಟಗ, ಜಟ್ಟಿಗ, ಜಟ್ಟಿ ಎಂದು ಮುಂತಾಗಿ ಹೆಸರುಗಳಿವೆ 'ಮಾಸ್ತಿಗಲ್ಲು' ವೀರರ ಸಹಗಮನ ಮಾಡಿದ ವೀರ ರಮಣಿಯರ ಸ್ಮಾರಕವಾಗಿ ಸ್ಥಾಪಿಸಿದ ಶಿಲೆಗಳು ಕೊಲ್ಲಲ್ಪಟ್ಟವರ ಆತ್ಮಗಳನ್ನು 'ಕೊಲೆ' ಎಂಬ ದೇವತೆಗಳ ಹೆಸರಿನಿಂದ ಪೂಜಿಸಲಾಗುತ್ತದೆ ಮಾರಿ ಉಪದ್ರವದಿಂದ ತೀರಿಕೊಂಡವರು 'ಮಾರಿಗೊಲೆ' ಎಂಬ ವಿಶಿಷ್ಟ ಪ್ರಕಾರದ ದೆವ್ವಗಳಾಗುವವೆಂಬ ನಂಬಿಕೆ ಹೆಣ್ಣು ಮಕ್ಕಳು ಕನ್ನೆತನದಲ್ಲಿಯೇ ಮರಣಪಟ್ಟರೆ 'ಕನ್ನೆಗೊಲೆ' ಎನಿಸಿಕೊಳ್ಳವರು ರಣದಲ್ಲಿ ಮಡಿದ ಕೆಲವರು 'ರಣಭೂತ' ಎಂತಲೂ ಎನಿಸಿಕೊಳ್ಳುವರು ಯುದ್ಧದಲ್ಲಿ ಮಡಿದ ವೀರರ ಸ್ಮರಣಾರ್ಥವಾಗಿ, ಅವರ ಮೂರ್ತಿಗಳನ್ನು ಸ್ಥಾಪಿಸಿ ಅವರಿಗಾಗಿ ಅಲ್ಲಲ್ಲಿ ದೇವಾಲಯಗಳನ್ನು ನಿರ್ಮಿಸಿದ್ದಿದೆ ಕೆಲವು ಕಡೆಗಳಲ್ಲಿ ವೀರರ ದೇವಾಲಯಗಳನ್ನು ಕಟ್ಟಿಸದೇ ಬರೀ ಶಿಲೆಗಳನ್ನು ಸ್ಥಾಪಿಸಿ ಅದಕ್ಕೆ 'ಗುತ್ತು' 'ಗುರ್ತು' ಎಂದು ಕರೆಯುವದೂ ರೂಢಿಯಲ್ಲಿದೆ ಕೆಲವೆಡೆಗಳಲ್ಲಿ ಆಯಾ ದೆವ್ವಗಳ ಹೆಸರಿನಿಂದ ಅಂದರೆ ಮಾಸ್ತಿಗುತ್ತು, ಚೌಡಿಗುತ್ತು, ಜಟ್ಟನ ಗುತ್ತು ಈ ಮೊದಲಾಗಿ ಗುರುತಿಸುವರು, ಈ ದೇವತೆಗಳ ಉತ್ಸವ ಮೂರ್ತಿಗಳನ್ನು ಜಾತ್ರೆ, ಸಂಕ್ರಾಂತಿ, ಬಂಡಿಹಬ್ಬ ಇತ್ಯಾದಿ ವಿಶೇಷ ಉತ್ಸವಗಳ ಸಂದರ್ಭದಲ್ಲಿ ಕಲಶದ ಮೇಲೆ ಕೂಡ್ರಿಸಿ ಮೆರೆಸುವ ಸಂಪ್ರದಾಯವಿದೆ ಆ ಮೂರ್ತಿಗಳ ಮೋರೆಗಳನ್ನು ಬೆಳ್ಳಿಯಿಂದ ಕಿರೀಟ ಸಹಿತವಾಗಿ ರಚಿಸುವದು ಸಾಮಾನ್ಯ ಕ್ರಮ

'ಕಲಶ' ಇದು ದೇವರನ್ನು ಆವಾಹನೆ ಮಾಡುವ ನೀರಿನ ತಂಬಿಗೆ (ಚಂಬು) ಕಲಶವು ಬೆಳ್ಳಿ, ತಾಮ್ರ, ಕಂಚು ಅದವಾ ಹಿತ್ತಾಳೆಯದಾಗಿದ್ದು ಗಿಂಡಿಯ ಆಕಾರದಲ್ಲಿರುವದು ಸಾಮಾನ್ಯವಾಗಿ ದೇವರ ಮೂರ್ತಿಯ ಹಿಂದೆ ಪ್ರಭಾವಳಿಯನ್ನು ನಿಲ್ಲಿಸುವ ರೂಢಿ ಇದ್ದಂತೆ ಈ ಕಲಶದೇವತೆಯ ತಂಬಿಗೆಯ ಮೇಲೂ ಸಹ ಪ್ರಭಾವಳಿಯ ಅಲಂಕಾರ ಮಾಡುವರು ಬಿದಿರಿನ ಕಡ್ಡಿಗಳಿಂದ ಕಮಾನಿನ ಆಕಾರವನ್ನು ಮಾಡುವರು ಅದರ ಅರ್ಧ ವರ್ತುಲಾಕಾರದ ಪಟ್ಟಿಗಳಿಗೆ ಸಮಾನಾಂತರವಾಗಿ ಸೇವಂತಿಗೆ, ಮಲ್ಲಿಗೆ, ಕನಕಾಂಬರ, ಸಂಪಿಗೆ, ಗೋವೆಸಂಪಿಗೆ, ಕೇದಿಗೆ,ಅಡಿಕೆ,ಸಿಂಗಾರ ಮೊದಲಾದ ಬೇರೆ ಬೇರೆ ಪ್ರಕಾರದ ಹೂವಿನ ಮಾಲೆಗಳನ್ನು ಸುಂದರವಾಗಿ ಜೋಡಿಸುವರು ದೇವರನ್ನು ಆವಾಹನೆ ಮಾಡಿದ ಕಲಶದ ಮೇಲೆ ದೇವರ ಮೂರ್ತಿಯನ್ನಿಟ್ಟು ಆ ಮೂರ್ತಿಯು ಬಿದಿರಿನ ಕಮಾನಿನ ಸರಿ ಮಧ್ಯದಲ್ಲಿ ಬರುವಂತೆ ಕೂಡ್ರಿಸುವರು ಕಮಾನಿನ ನಡುವೆ ಮೇಲ್ಭಾಗದಲ್ಲಿ ಬೆಳ್ಳಿಯಿಂದ ಮಾಡಿದ ಅಂತವಾದ ಪುಟ್ಟ ಕೊಡೆಯೊಂದು ಶೋಭಿಸುವುದು ಬೆಳ್ಳಿಯ ಸುಂದರವಾದ ಪತಾಕೆಗಳನ್ನು ಸುತ್ತಲೂ ಜೋಡಿಸುವರು ಈ ಕಲಶ ದೇವತೆಯನ್ನು ತಲೆಯ ಮೇಲೆ ರೂಮಾಲಿನಿಂದ ಸುತ್ತಿ ಬಿಗಿದುಕೊಳ್ಳುವರು

ಕಲಶಗಳನ್ನು ಹೊರುವುದು ಕೆಲವು ಕುಟುಂಬದವರಿಗಷ್ಟೇ ಮೀಸಲಾಗಿದ್ದು ಅದು ಹಿಂದಿನಿಂದಲೂ ಬಂದ ಪರಂಪರೆಯಾಗಿದೆ ಕಲಶಗಳನ್ನು ಹೊರುವವರು ಸ್ನಾನಮಾಡಿ ಮಡಿಯುಟ್ಟು ಉಪವಾಸದಲ್ಲಿಯೇ ಇದ್ದು ಕಲಶದೇವತೆಯನ್ನು ಪೂಜಿಸಿ ನಂತರ ತಲೆಯ ಮೇಲೆ ಕಟ್ಟಿಕೊಳ್ಳುವರು ಆ ದಿನದ ಉತ್ಸವದ ಮೆರವಣಿಗೆ ಮುಗಿದು ಕಲಶವನ್ನು ಮಾಡಿಯೇ ಇಡುವರು ಕಲಶವು ನಿಶ್ಚಿತ ಸ್ಥಾನ ಸೇರಿದ ನಂತರವೇ ಆಹಾರವನ್ನು ಸೇವಿಸುವರು

ಈ ಕಲಶ ದೇವತೆಗಳು ವಿಶೇಷ ಸಂದರ್ಭಗಳಲ್ಲಿ ಮಾತ್ರ ಹೊರಡುವವು. ಕೆಲವು ದೇವಾಲಯಗಳಲ್ಲಿ ಜಾತ್ರೆಯ ಸಮಯದಲ್ಲಿ, ಮಕರ ಸಂಕ್ರಾಂತಿಯ ಸಮಯದಲ್ಲಿ ಕಲಶಗಳನ್ನು ಹೊರಡಿಸುವರು ಉತ್ತರ ಕನ್ನಡದಲ್ಲಿ ಪ್ರಚಾರದಲ್ಲಿರುವ 'ಬಂಡಿ ಹಬ್ಬ' ಗಳಲ್ಲಂತೂ ಕಲಶ ದೇವತೆಯ ಮೆರವಣಿಗೆಯೇ ತುಂಬ ಆಕರ್ಷಕವಾಗಿರುವದು ಉತ್ತರ ಕನ್ನಡ ಜಿಲ್ಲೆಯಲ್ಲಿ ಬಂಡಿಹಬ್ಬವು ಸಾಮಾನ್ಯವಾಗಿ ಅಮ್ಮನವರ ದೇವಾಲಯಗಳಲ್ಲಿ ಜರಗುವ ವಿಶಿಷ್ಟ ಹಬ್ಬ. ಮೊದಲು ನಾಲ್ಕು ಗಾಲಿಗಳುಳ್ಳ ಬಂಡಿಯಲ್ಲಿ ದೇವರ ಮೂರ್ತಿಯನ್ನಿಟ್ಟು ಬಂಡಿ ಎಳೆಯುತ್ತಿದ್ದರಿಂದ 'ಬಂಡಿಹಬ್ಬ' ಎಂದು ಹೆಸರು ಬರಲು ಕಾರಣವಾಯಿತೆಂದು ಹೇಳಲಾಗುವದು ಈಗ ಎಲ್ಲ ಬಂಡಿಹಬ್ಬಗಳಲ್ಲಿ ಬಂಡಿಯಲ್ಲಿ ದೇವರ ಮೂರ್ತಿಯನ್ನಿಟ್ಟು ಎಳೆಯುವ ಸಂಪ್ರದಾಯವಿಲ್ಲದಿದ್ದರೂ ಸಿರ್ಸಿ ಹಾಗೂ ಗೋಕರ್ಣದಲ್ಲಿ



ಈಗಲೂ ಬಂಡಿಯಲ್ಲಿ ದೇವರನ್ನು ಕೂಡ್ರಿಸಿ ಎಳೆಯುವರು ಎಲ್ಲ ಬಂಡಿಹಬ್ಬಗಳಲ್ಲಿ ಕಲಶಗಳ ಮೆರವಣಿಗೆ, ಕೋಳಿ--ಕುರಿಗಳ ಬಲಿ, ಹಗರಣ, ಕೆಂಡ ಕಾಯುವದು ಇವಿಷ್ಟು ಮುಖ್ಯ ಆಕರ್ಷಣೆಗಳು ಒಂದು ಅಂಕಣದಷ್ಟು ಸ್ಥಳದಲ್ಲಿ ನಿಗಿನಿಗಿ ಕೆಂಡಗಳನ್ನು ಹರವಿಡುವರು ದೇವರನ್ನು ಹೊತ್ತವರು, ಕಲಶ ಹೊತ್ತವರು, ಕಲಶದ ಸಂಗಡ ಇದ್ದ ಕಟ್ಟಿಗೆದಾರರು ಹಾಗೂ ಇನ್ನಿತರ ಭಕ್ತರು ಕೆಂಡದ ಮೇಲೆ ಬರಿಗಾಲಿನಲ್ಲಿಯೇ ನಡೆಯುವರು

ಬಂಡಿ ಹಬ್ಬಗಳು ಉತ್ತರ ಕನ್ನಡ ಜಿಲ್ಲೆಯ ಅನೇಕ ಪ್ರದೇಶಗಳಲ್ಲಿ ಆಗುವುದಾದರೂ ಅಂಕೋಲಾ ಸೀಮೆ, ಗೋಕರ್ಣ ಸೀಮೆ ಹಾಗೂ ಚಂದಾವರ ಸೀಮೆಗಳಲ್ಲಿ ಈ ಬಂಡಿಹಬ್ಬಗಳು ವಿಶೇಷ ಇವುಗಳಲೆಲ್ಲಾ ಅಂಕೋಲಾದ ಬಂಡಿ ಹಬ್ಬವು ಬಹಳ ಪ್ರಸಿದ್ಧವಾಗಿದೆ ಇಲ್ಲಿಯ ಬಂಡೀ ಹಬ್ಬವು ಅಕ್ಷಯ ತದಿಗೆಯ ದಿನ ಪ್ರಾಪಂಭವಾಗಿ ೧೨ ದಿನಗಳವರೆಗೂ ನಡೆಯುವುದು ಹಬ್ಬಕ್ಕೆ ಎರಡು ದಿನ ಮೊದಲು ನೆರೆಯ ಗ್ರಾಮದ ದೇವರುಗಳನ್ನು ಹಬ್ಬಕ್ಕೆ ಆಮಂತ್ರಿಸಲು ಕಳಸದೇವತೆ ಮೆರವಣಿಗೆಯಲ್ಲಿ ಹೋಗುವ ದೃಶ್ಯ ಬಹಳ ಸುಂದರವಾದುದು ಬಂಡೀ ಜಾತ್ರೆಯ ದಿನ ಕಳಸದೇವತೆಯನ್ನು ವಿಶೇಷವಾದ ಹೂಮಾಲೆಗಳಿಂದ ಶೃಂಗರಿಸಿ ಛತ್ರ, ಚಾಮರಗಳ ಸಡಗರದೊಂದಿಗೆ ಉಯ್ಯಾಲೆ ಚಪ್ಪರಕ್ಕೆ ತರಲಾಗುವದು ಉಯ್ಯಾಲೆ ಚಪ್ಪರವು ಸಮಾನಾಂತರದಲ್ಲಿ ಲಂಬವಾಗಿ ನಿಂತ ಎರಡು ಉತ್ತರವಾದ ಬೃಹತ್ ಕಂಬಗಳಿಗೆ ಮಧ್ಯದಲ್ಲಿ ಕೊರೆದ ತೂತುಗಳಲ್ಲಿ ಅಡ್ಡ ಹೊಗಿಸಿದ ಅಚ್ಚಿನಲ್ಲಿ ಮೇಲಿನಿಂದ ಕೆಳಕ್ಕೆ ಸುತ್ತುವ ಕಟ್ಟಿಗೆಯ ಚೌಕಟ್ಟಿನ ಹಂದರ, ಈ ಚೌಕಟ್ಟಿನ ಎದುರುಬದುರು ಸ್ಥಾನಗಳಲ್ಲಿ ನಾಲ್ಕು ತೂಗುಮಣೆಗಳನ್ನು ಜೋಡಿಸಲಾಗಿರುತ್ತದೆ ಈ ತೂಗುಮಣೆಯ ಮೇಲೆ ಕಲಶವನ್ನು ಹಿಡಿದವನು ಅದನ್ನು ತನ್ನ ತೊಡೆಯಮೇಲಿಟ್ಟುಕೊಂಡು ಕುಳಿತು ಒಂದು ಕೈಯಲ್ಲಿ ಗಂಟೆ ಬಾರಿಸುತ್ತ ಮೇಲೇರುವ ದೃಶ್ಯವು ನಿಜವಾಗಿಯೂ ರೋಮಾಂಚನಕಾರಿ ಈ ದೃಶ್ಯವನ್ನು ವೀಕ್ಷಿಸಲು ಸಾವಿರಗಟ್ಟಲೆ ಜನ ಸೇರುವರು ಅಂಕೋಲೆಯ ಸಮೀಪದ ಕೊಗ್ರೆ ಗ್ರಾಮದ ಬಂಡಿ ಹಬ್ಬದಲ್ಲಿ ನಾಲ್ಕು ಕಳಸ ದೇವತೆಗಳು ನಾಲ್ಕು ಮಣೆಗಳ ಮೇಲೆ ಒಂದೇ ಸಲ ಏರಿಳಿಯುವ ದೃಶ್ಯ ಇನ್ನೂ ಮನೋಹರವಾದುದು ಮಡಿದು ಹೋದ ವೀರರ ಹಾಗೂ ಮಹಾಸತಿಯರ ಸಂಕೇತವಾಗಿ ಈ ಹಬ್ಬವನ್ನು ಆಚರಿಸಲಾಗುವದು ಬಂಡಿ ಹಬ್ಬದ ಮೊದಲಿನ ಹನ್ನೊಂದೂ ದಿನಗಳಲ್ಲಿಯೂ ಪ್ರತಿ ಸಂಜೆ ಕಳಸದೇವತೆಯ ಮೆರವಣಿಗೆಯು ವಿಶೇಷವಾದ್ಯದೊಂದಿಗೆ ಹೊರಟು ರಾತ್ರಿಗೆ ಊರ ಮಧ್ಯದಲ್ಲಿರುವ ಆಡುವಕಟ್ಟೆ (Playing Platform) ಯ ಮೇಲೆ ಕೂಡ್ರಿಸಿ ಪೂಜಾ ವಿದಾನಗಳನ್ನು ನಡೆಸುವರು ದೇವರೆದುರಿನಲ್ಲಿ ಹಗರಣ (a folk drama) ನಡೆಯುವದು ಬೇರೆ ಬೇರೆ ದೇವರುಗಳ ಚಿತ್ರ ಬರೆದ ಕಟ್ಟಿಗೆಯ ಮುಖವಾಡ ತೊಟ್ಟು ಕುಣಿಯುವರು ಬಂಡಿಹಬ್ಬದ ಮೊದಲ ದಿನ ಮಾಸ್ತಿಕೊಂಡ ಹಾಯುವರು ಹಾಗೂ ವಿಶೇಷ ಹಗರಣ ನಡೆಯುವದು

ಕುಮಟಾ ತಾಲೂಕಿನ ಮಾಸೂರಿನಲ್ಲಿ ಮಕರ ಸಂಕ್ರಾಂತಿ ಉತ್ಸವದ ಸಂದರ್ಭದಲ್ಲಿ ಬಬ್ರು ದೇವರ ಕಲಶ ಏಳುವುದು ಜೊತೆಗೆ ಸೂಲುಬೀರ ಎಂಬ ಕಲಶದೇವತೆಯೂ ಇರುವುದು ಎರಡೂ ಕಲಶ ದೇವತೆಗಳನ್ನು ಹೊಳೆಯಲ್ಲಿ ತೆಪ್ಪಕಟ್ಟಿದ ದೋಣಿಗಳಲ್ಲಿ ಕೂಡ್ರಿಸಿ ಹತ್ತಿರ ಮಾಸೂರಕುರ್ವೆಗೆ ಒಯ್ಯುವ ದೃಶ್ಯ ರಮ್ಯವಾದುದು

ಕಲಶದೇವತೆಗಳ ಉತ್ಸವಕ್ಕೆ ಕುಮಟಾ ತಾಲೂಕಿನಲ್ಲಿರುವ ಹೆಗ್ಡೆಯಲ್ಲಿ ನಡೆಯುವ ಜಾತ್ರೆಯು ವಿಶಿಷ್ಟವಾದುದು ಜಾತ್ರೆಗೆ ೧೫ ದಿನಗಳು ಇರುವಾಗಲೇ ಕಲಶದೇವತೆಗಳು ಏಳಲು ಪ್ರಾರಂಭವಾಗುತ್ತವೆ ಮೊದಲಿಗೆ ಏಳುವುದು ಅಮ್ಮನವರ ಕಲಶ ನಂತರ ಹಿರೇಬೀರು, ಸೂಲಬೀರು, ಶೂರಭದ್ರ, ಭದ್ರಬೀರು, ಬಾಗ್ಲು ಬೀರು, ಸಾರಂಗ ಬೀರು, ಸೀಮೆ ಬಂಟ, ಕಲೀರ ಭದ್ರ, ಹೊನ್ನಪ್ಪಾ, ಗೇರಾರಯಮ್ಮಾ ಹಾಗೂ ನಾಗದೇವತೆ ಎಂಬ ಹನ್ನೊಂದು ಕಲಶ ದೇವತೆಗಳು ಹೊರಡುವವು. 'ಸೂಲಬೀರು' ಕಲಶದೇವತೆಯನ್ನು ಹೊತ್ತವನು ರಾತ್ರಿಯಲ್ಲಿ ಗರ್ಭಗುಡಿಯ ಮುಂದಿನ ಗಂಟೆಮಂಟಪದ ಮೆಟ್ಟಲುಗಳನ್ನು ಮೊಣಕಾಲಿನಲ್ಲಿಯೇ ಸಾವಕಾಶ ಏರುತ್ತಾ ಗರ್ಭಗುಡಿಯ ಬಾಗಿಲವರೆಗೂ ಮೊಣಕಾಲಿನಲ್ಲಿಯೇ ತೆವಳುತ್ತಾ ಬರುವುದು ತುಂಬ ಆಕರ್ಷಕ ನೋಟ ಹೆಗ್ಡೆ ಜಾತ್ರೆಯ ದಿನ ಹನ್ನೊಂದೂ ಕಲಶ ದೇವತೆಗಳು ಮೆರವಣಿಗೆ ಹೊರಡುವುವು. ಆ ದಿನ ಒಬ್ಬೊಬ್ಬರೇ ಎರಡು -- ಮೂರು ಕಲಶಗಳನ್ನು ಸೇರಿಸಿದ ಸಂಯುಕ್ತ ಕಲಶಗಳನ್ನು ಹೊರುವುದೂ ಇದೆ ಜಾತ್ರೆಯ ದಿನ ರಾತ್ರಿ ಮೃಗದೇಟೆಯ ಕಾರ್ಯಕ್ರಮವಿರುವುದು ಕಲಶಗಳು ದೇವರ ಉತ್ಸವದಲ್ಲಿ ಹೊರಡುವುವು. ಮೃಗದೇಟೆಯ ಪ್ರತೀಕವಾಗಿ ಬಹಳಷ್ಟು ಸುಡು -- ಮದ್ದನ್ನು ಸುಡುವರು

ಜಾತ್ರೆಯ ಸಮಯದಲ್ಲಾಗಲೀ, ಬಂಡೀ ಹಬ್ಬದ ಸಮಯದಲ್ಲಾಗಲೀ ಅದವಾ ಇನ್ನಾವ ಉತ್ಸವದ ಸಂದರ್ಭವೇ ಆಗಿರಲಿ ಕಲಶದೇವತೆಗಳ ಮೆರವಣಿಗೆ ನೋಡಲು ತುಂಬ ರಮ್ಯವಾಗಿರುವುದು ಒಂದು ಕೈಯಲ್ಲಿ ಗಂಟೆ ತೂಗೂತ್ತಾ ಮತ್ತೊಂದು ಕೈಯಲ್ಲಿ ಕಲಶವನ್ನು ಹಿಡಿದುಕೊಂಡು ದೇವರ ಆವೇಶವನ್ನು ಹೊಂದಿಕೊಂಡು ಓಡಿ ಬರುವ ಕಲಶದ ರಭಸವನ್ನು ನೋಡಿಯೇ ಮೈ ರೋಮಾಂಚನವಾಗುವುದು ಕಲಶದವರೊಡನೆ ಬೆಳ್ಳಿಯ ಕಟ್ಟಿಗೆ ಹಿಡಿದುಕೊಂಡವರು ದಾರಿಯಲ್ಲಿ ಜನರನ್ನು ಬದಿಗೆ ಸರಿಸಲು ಕೂಗುತ್ತ ಓಡಿಬಂದು ದಾರಿಯನ್ನು ಸುಗಮಗೊಳಿಸುವರು ಕಲಶದವನು ಓಡುವ ರಭಸಕ್ಕೆ ಅವನ ತಲೆಯ ಮೇಲಿರುವ ಕಲಶ ಬೀಳಬಾರದೆಂದು ಒಬ್ಬನು ಕಲಶವನ್ನೂ, ಕಲಶ ಹಿಡಿದವನ ತೋಳನ್ನು ಹಿಡಿದು ಅವನ ಜೊತೆಗೇ ಓಡಿ ಬರುವನು

ಕಲಶದೇವತೆಯನ್ನು ಹೊರುವ ಸಂಪ್ರದಾಯವು ನಮ್ಮ ಜಿಲ್ಲೆಯ ಜನರ ಸಂಸ್ಕೃತಿಯ ಒಂದು ಸುಂದರ ವೃತ್ತಾಂತವಾಗಿದೆ ಕಲಶದ ರಚನೆಯಲ್ಲಿಯ ಕಲಾಚಮತ್ಕಾರವನ್ನು ಸೌಂದರ್ಯ ದೃಷ್ಟಿಯಿಂದ ನೋಡಿದರೆ ಅಪೂರ್ವ ಎಂದೆನಿಸುವುದು ಮೈಮೇಲೆ ಬಂದಾಗಿನ ಕಲಶ ದೇವತೆಗಳ ವರ್ತನವೂ ನೋಡುವಂಥಹದಿರುವುದು 



# ಕರಗ -- ಶಕ್ತಿದೇವತೆಯ ಅಪರಾವತಾರ

---ಪಿ. ರಾಜೇಂದ್ರ.

ರಗ -- ಕರ್ನಾಟಕರಾಜ್ಯದ ಹಲವು ಪ್ರದೇಶ ಜನಜನಿತವಾದ ಒಂದು ದಾರ್ಮಿಕ ಮತ್ತು ಸ್ಕೃತಿಕ ಉತ್ಸವ ಪೌರಾಣಿಕ ಮತ್ತು ಜನ ನೆಲೆಗಟ್ಟಿನಲ್ಲಿ ತನ್ನ ಪ್ರತ್ಯೇಕತೆಯನ್ನುಳಿಸಿ ಡಿರುವ 'ಕರಗ' ಪ್ರಾದೇಶಿಕವಾಗಿ ತನ್ನತನವನ್ನು ಗಿಗೂ ಸಹಾ ಎತ್ತಿ ಹಿಡಿದಿದೆ ಸಾಮಾನ್ಯವಾಗಿ ಗಾದಿ ಹಬ್ಬಕಳೆದ ಹದಿನೈದು ಇಪ್ಪತ್ತುದಿನಗ ಂತರ ಈ ಕರಗ ಮಹೋತ್ಸವವು ರಾಜ್ಯದ ಲಾರ, ಬೆಂಗಳೂರು, ಮಾಲೂರು, ಶಿಡ್ಲಘಟ್ಟ ತ್ತು ತುಮಕೂರು ಪ್ರದೇಶಗಳಲ್ಲಿ ವೈಭವದಿಂದ ವತ್ತಾಗಿ ನೆರವೇರುವುದು ಚಿಣ್ಣಾರಿಗಳಿಂದ ಯೋವೃದ್ಧರವರೆಗೂ ಬಹುವಿದವಾಗಿ ಆಕರ್ಷಿ ಸುವ ಈ ಕರಗ ಮಹೋತ್ಸವ ವಸಂತಮಾಸದ ದು ಬೆಡಗು

ರಗ -- ಪೌರಾಣಿಕ ಹಿನ್ನೆಲೆ -- ಹಿಂದೆ ಪಂಚ ಡವರ ಪತ್ನಿ ಪಾಂಚಾಲಿಯ ಪಾತಿವ್ರತ್ಯವನ್ನು ಯಂ ದರ್ಮರಾಯನೇ ಪ್ರಶ್ನಿಸಿದಾಗ -- ದ್ರೌಪದಿ ಶಕ್ತಿರೂಪದ ಸಾಮರ್ಥ್ಯವನ್ನು ಸಾಬೀತು ಪಡಿ ಸಲುವಾಗಿ ಪಾಂಡವರ ಮುಂದೆ ಪಣತೊಡು ಶುಭ್ರ ವಸ್ತ್ರದಾರಿಣಿಯಾಗಿ ಹಸಿಮಣ್ಣಿನಲ್ಲಿ ಶಮಾಡಿ ಅದರಲ್ಲಿ ಜಲವನ್ನು ತಂದು, ಆ ಕಲ ನ್ನೆ ಶಿರದ ಮೇಲೆ ಹೊತ್ತು ನರ್ತಿಸುತ್ತಾ ಕೊನೆಗೆ ಕುಂಡ ಪ್ರವೇಶಿಸಿ ತನ್ನ ಪಾತಿವ್ರತ್ಯವನ್ನು ನಿರೂ ಕೊಳ್ಳುತ್ತಾಳೆ ಈ ಪೌರಾಣಿಕ ಹಿನ್ನೆಲೆಯಲ್ಲಿ ದಿಗೂ ಸಹಾ ಶಕ್ತಿ ದೇವತೆಯ ಹೆಸರಿನಲ್ಲಿ 'ಕರಗ' ಬುದಾಗಿ ವರ್ಷಕ್ಕೊಮ್ಮೆ ಚೈತ್ರ - ವೈಶಾಖದ ಹೆಯಲ್ಲಿ ಉತ್ಸವ ಜರುಗುವುದುಂಟು

ರಗ ಹೊರುವವರ ವಿದಿವ್ರತಾಚರಣೆ -- ಸಹಜ ಗಿ ಕರಗ ಹೊರುವ ವ್ಯಕ್ತಿ ಪರಿಶುಭ್ರವಾಗಿ ಒಂದು ರದ ಕಾಲ ಉಪವಾಸ ವ್ರತವನ್ನಾಚರಿಸುತ್ತಾ ವರ ಸನ್ನಿದಿಯಲ್ಲಿ ದೇವತಾಕಾರ್ಯದಲ್ಲಿ ಭಾಗಿ ಗಿ ಅಂತರಂಗ ಬಹಿರಂಗ ಶುದ್ದಿಯಾಗಬೇಕೆಂ ಮ ವಿದಿನಿಯಮ ಕರಗವನ್ನು ಶಿರದ ಮೇಲೆ ತ್ತು ಸುಂದರ ಮಲ್ಲಿಗೆ ಹಾರದಿಂದ ಅಲಂಕರಿ ಳ್ಳುವವರೆಗೂ ಕರಗ ಹೊರುವ ವ್ಯಕ್ತಿ ನಿಷ್ಕಳಂಕವಾಗಿ ದೇವರನ್ನು ಸೇವಿಸಬೇಕು ರಾಜ್ಯದ ಹಲವು ಕಡೆ ಸ್ತ್ರೀಯರೇ ಕರಗ ಹೊರುವ ಸಂಪ್ರದಾಯವುಂಟು ಉದಾಹರಣೆಗೆ ಚಿಕ್ಕಬಳ್ಳಾಪುರದ ಅರುಂದತಿ ಕರಗವಂತೂ ಪ್ರತಿವರ್ಷ ಒಬ್ಬ ಹೆಂಗಸಿನಿಂದಲೆ ಕರಗ ಮಹೋತ್ಸವ ನಡೆಯುವುದು ಆದರೆ ಮೇಲೆ ತಿಳಿಸಿದ ಬಹುತೇಕ ಕರಗ ಮಹೋತ್ಸವ ಜರುಗುವ ಪ್ರದೇಶಗಳಲ್ಲಿ ಪುರುಷರೇ ಕರಗವನ್ನು ಹೊತ್ತು ತರುವ ವಾಡಿಕೆಯಿದೆ ಶುಭ್ರ ಅರಿಷಿಣ ಸೀರೆಯುಟ್ಟು ಕೈತೋಳುಗಳಿಗ ಬಳೆ ಹಾಗೂ ಕಾಲುಂಗುರ ಮೂಗುತಿಯಿಟ್ಟು ಶಕ್ತಿದೇವತೆಯನ್ನು ಆಹ್ವಾನಿಸಿಕೊಳ್ಳುವ ಈ ವ್ಯಕ್ತಿ ಕರಗ ಹೊತ್ತುತರುವ ಮುನ್ನ ಮೇಲೆ ತಿಳಿಸಿದ ರೀತಿಯಲ್ಲಿ ಒಂದುವಾರದಕಾಲ ಉಪವಾಸ ವ್ರತವನ್ನಾಚರಿಸುತ್ತಾ ದೇವರನ್ನು ಸೇವಿಸುತ್ತಾನೆ ಹಸಿ ಕರಗದ ದಿನದಂದು ವೀರಕುಮಾರರ ಜೊತೆಗೂಡಿ ಹಸಿ ಮಡಕೆಯಲ್ಲಿ ನೀರನ್ನು ತಂದು ದರ್ಮರಾಯನ ಗುಡಿಗೆ ಬಂದು, ಅಲ್ಲಿ ಪೂಜಾಕೈಂಕರ್ಯವಿದಿವಿಧಾನದ ನಂತರ ಹಸಿ ಕರಗವನ್ನು ಶಿರದ ಮೇಲೇರಿಸುತ್ತಾನೆ ಇದಕ್ಕೆ ಸುಂದರ ಮಲ್ಲಿಗೆ ಹೂಮಾಲೆಗಳಿಂದ ಅಲಂಕಾರ ಮಾಡಲ್ಪಡುತ್ತದೆ ಇದನ್ನು ಹೊತ್ತ ವ್ಯಕ್ತಿ ನರ್ತಿಸುತ್ತಾ ನರ್ತಿಸುತ್ತಾ ಶಿರದ ಮೇಲಿನ ಮಡಕೆ ಕೆಳಗ ಜಾರದ ಹಾಗೆ ಮುಂದೆ ಸಾಗುತ್ತಾನೆ ಈ ಸಮಯದಲ್ಲಿ ಕರಗ ಹೊರುವ ವ್ಯಕ್ತಿಯನ್ನು ಶಕ್ತಿ ದೇವತೆಯೆಂದೇ ನಮ್ಮ ಜನಪದ, ಶಕ್ತಿ ದೇವತೆಗೆ ಪೂಜೆ ಮಾಡುತ್ತದೆ ಮನೆ ಮನೆ ಮುಂದೆ ವನಿತೆಯರು ಮತ್ತು ಗೃಹಿಣಿಯರು ರಂಗೋಲಿ - ತಳಿರು ತೋರಣಗಳಿಂದ ಶಕ್ತಿದೇವತೆಯನ್ನು ಸ್ವಾಗತಿಸುತ್ತಾರೆ ಹೂವಿನ ಕರಗ ಮಹೋತ್ಸವದ ರಾತ್ರಿ - ಊರಿನಲ್ಲಿ ಒಂದು ಹಬ್ಬದ ವಾತಾವರಣವನ್ನುಂಟುಮಾಡುತ್ತೆ ಈ ಸಂದರ್ಭದಲ್ಲಿ ಪಟ್ಟಣದ ಹಲವು ದೇವಾಲಯಗಳಲ್ಲಿ ಶಕ್ತಿ ದೇವತೆಯ ಹೆಸರಿನಲ್ಲಿ ಬಕ್ತಾದಿಗಳಿಗೆ ಅನ್ನಸಂತರ್ಪಣೆ ನಡೆಯುತ್ತೆ ಹಾಗೆಯೆ ಇದರ ನಿಮಿತ್ತ ಹಲವಾರು ಸಾಂಸ್ಕೃತಿಕ -- ಧಾರ್ಮಿಕ ಕಾರ್ಯಕ್ರಮಗಳು ಸಮ್ಮಿಲನವಾಗುವುದಲ್ಲದೆ ನೋಟಕರ ಕಣ್ಮನ ಸೆಳೆದು ಲವಲವಿಕೆಯನ್ನುಂಟುಮಾಡುತ್ತದೆ ಬೆಂಗಳೂರಿನಲ್ಲಿ ಪ್ರತಿವರ್ಷ ಬುದ್ದಪೂರ್ಣಿಮೆಯ ಸಮಯಕ್ಕೆ ಜರುಗುವ ಕರಗವಂತೂ ನಗರದ ಸುತ್ತಮುತ್ತಲಿನ ಜಿಲ್ಲೆಯ ಮಂದಿಯನ್ನು ಆಕರ್ಷಿಸಿ ಪ್ರಸಿದ್ದವಾಗಿದೆ ಹಾಗೆಯೆ ಮಾಲೂರಿನಲ್ಲಿ (ಕೋಲಾರ ಜಿಲ್ಲೆ) ಜರಗುವ 'ಒನಕೆ ಕರಗ' ಸಹಾ ತನ್ನ ಪ್ರತ್ಯೇಕತೆಯನ್ನು ಎತ್ತಿ ಹಿಡಿದಿರುವುದು ದಿಟ ಇತರ ಪ್ರಾಂತ್ಯಗಳಾದ ಚಿಂತಾಮಣಿ, ಕೋಲಾರ, ಶಿಡ್ಲಘಟ್ಟ ಮತ್ತು ಚಿಕ್ಕಬಳ್ಳಾಪುರ ಪ್ರದೇಶದಲ್ಲಿ ಎರಡು ಮೂರು ಸಂಘ (ಧಾರ್ಮಿಕ)ಗಳ ವತಿಯಿಂದ, 'ದ್ರೌಪದಮ್ಮನ ಕರಗ' 'ಅರುಂಧತಿ ಕರಗ' ಮತ್ತು 'ಧರ್ಮರಾಯನ ಕರಗ' ಎಂಬ ಎರಡು ಮೂರು ಕರಗಗಳು ನಡೆಯುತ್ತಾ ಬಂದಿದೆ



ಒಟ್ಟಿನಲ್ಲಿ ಚೈತ್ರಮಾಸದ ರಾತ್ರಿಯಲ್ಲಿ ನಡೆಯುವ ಸುಂದರ ಶೋಭಿತಮಲ್ಲಿಗೆ ಹೂವಿನಕರಗ ಉತ್ಸವದ ಕಾರ್ಯಕ್ರಮ ಕೋಲಾರ ಮತ್ತು ಬೆಂಗಳೂರು ಜಿಲ್ಲೆಯಲ್ಲಿ ವ್ಯಾಪಕತೆ ಪಡೆದಿದೆ. ಹಳ್ಳಿ ಪ್ರದೇಶಗಳಿಂದ ತಂಡೋಪತಂಡವಾಗಿ ಬರುವ ನೂರಾರು ಮಂದಿ ಜನರು ಈ ಕರಗವನ್ನು ನೋಡಿ ಆನಂದಿಸುತ್ತಾರೆ ಭಕ್ತಾದಿಗಳು ಭಕ್ತಿಭಾವದಿಂದ ಶಕ್ತಿದೇವತೆಗೆ ನಮಿಸುತ್ತಾರೆ 

# ತಿರುಮಲೆ ತಿರುಪತಿ ದೇವಸ್ಥಾನಗಳು --- ತಿರುಪತಿ

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

"ಸ್ವಲ್ಪವೇ ಸಂಪದವನ್ನು ನೀಡಿರಿ, ದೈವಿಕ ಫಲವನ್ನು ಪಡೆಯಿರಿ"

ಶ್ರೀ ವೆಂಕಟೇಶ್ವರಸ್ವಾಮಿ ಸನ್ನಿಧಿಯಾದ ತಿರುಮಲೆ ಕಲಿಯುಗ ವೈಕುಂಠವಾಗಿದ್ದು, ದಿನವೂ ಸಹಸ್ರಾರು ಮಂದಿ ಯಾತ್ರಿಕರು ಸ್ವಾಮಿ ದರ್ಶನಕ್ಕಾಗಿ ಆಗಮಿಸುತ್ತಾರೆ ದಿನದಿನವೂ ಹೆಚ್ಚುತ್ತಿರುವ ಯಾತ್ರಿಕ ಸಂದಣಿಯ ವಸತಿ ಸೌಲಭ್ಯಗಳ ಏರ್ಪಾಡಿಗಾಗಿ ತಿ ತಿ ದೇ ಗಳು ಸುಸಜ್ಜಿತ ಅತಿಥಿಗೃಹಗಳನ್ನೂ, ಈಗಿರುವ ಕಾಟೇಜುಗಳ ಮೇಲೆ ಮೊದಲ ಅಂತಸ್ತು ಕೊಠಡಿಗಳನ್ನೂ, ಸಪ್ತಗಿರಿ ಸತ್ರಗಳ ಕೋಣೆಗಳನ್ನೂ ದಾನಯೋಜನೆಯಲ್ಲಿ ನಿರ್ಮಿಸುತ್ತಿದೆ ತಿರುಮಲೆಯಲ್ಲಿ ವರ್ಷಪೂರ್ತಿ ಸೇರುವ ಯಾತ್ರಿಕ ಸಂದೋಹದ ಸೇವೆಯಲ್ಲಿ ಪಾಲುಗೊಳ್ಳಲು ಭಕ್ತದಾನಿಗಳಿಗೆ ಇದೊಂದು ಸದವಕಾಶ

## 1 ಮೊದಲ ಅಂತಸ್ತು

ತಿರುಮಲೆಯ ಆಳ್ವಾರ್ ಟ್ಯಾಂಕ್, ಮಂಗಳಬಾವಿ, ಶಂಕುಮಿಟ್ಟ, ಶೇಷಾದ್ರಿನಗರ, ಅಂಜನಾದ್ರಿನಗರ, ಗರುಡಾದ್ರಿನಗರ ಕಾಟೇಜುಗಳಲ್ಲಿ (ಸಿ ಹಾಗೂ ಡಿ ಭಾಗಗಳು) (ನೆಲ ಅಂತಸ್ತಿನಲ್ಲಿರುವ ಎ ಹಾಗೂ ಬಿ ಭಾಗಗಳಲ್ಲಿ ಮೇಲೆ) ೨೦೦ ಮೊದಲ ಅಂತಸ್ತು ಕಾಟೇಜುಗಳನ್ನು ನಿರ್ಮಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದ್ದು ಎ ಟಿ.ಸಿ., ಎಂ ಬಿ ಸಿ., ಎಸ್ ಎಂ.ಸಿ , ಎಸ್ ಎನ್.ಸಿ., ಗಳಲ್ಲಿ ನೂರು ಕಾಟೇಜುಗಳ ಮೊದಲ ಅಂತಸ್ತು ನಿರ್ಮಾಣ ಪೂರ್ತಿಯಾಗಿ, ದಾನಿಗಳಿಗೆ ನೀಡಲಾಗಿದೆ ಎ ಎನ್.ಸಿ., ಜಿ.ಎನ್ ಸಿ. ಗಳಲ್ಲಿನ ನೂರು ಮೊದಲ ಅಂತಸ್ತು ಕಾಟೇಜುಗಳು ನಿರ್ಮಾಣ ಪೂರ್ಣಗೊಳ್ಳುವ ಹಂತದಲ್ಲಿವೆ ಇವು ತಿರುಮಲೆಯ ಟಿ ಬಿ ಶಂಕು, ಚಕ್ರ, ನಾಮಗಳ ಬಳಿಯಿವೆ ನೆಲ ಅಂತಸ್ತಿನ ಎ ಹಾಗೂ ಬಿ ಕಾಟೇಜುಗಳು, ಮೇಲೆ ಸಿ ಹಾಗೂ ಡಿ ಕಾಟೇಜುಗಳು ಪ್ರತಿಯೊಂದೂ ಎರಡು ಕೋಣೆಗಳನ್ನು ಹೊಂದಿ (೯೭೨ ಚದರಡಿ ಹಾಗೂ ೧೧೧೨ ಚದರಡಿ) ಸ್ನಾನ ಶೌಚಗೃಹಗಳನ್ನೊಳಗೊಂಡಿರುತ್ತವೆ

ರೂ ೧.೫ ಲಕ್ಷ ರೂಗಳನ್ನು ನೀಡುವುದರಿಂದ ದಾನಿಯು ಒಂದು ಮೊದಲ ಅಂತಸ್ತಿನ ಕಾಟೇಜುಗಳನ್ನು ತಮ್ಮ (ತಮ್ಮ ಸಂಸ್ಥೆ, ಟ್ರಸ್ಟ್, ಕಂಪನಿ) ಹೆಸರಿನಲ್ಲಿ ದಾನ ಮಾಡಬಹುದು

## ರಾಮಬಗೀಚ ಅತಿಥಿ ಗೃಹಗಳು

ಪ್ರತಿಯೊಂದು ಅಂತಸ್ತಿನಲ್ಲೂ ೫೦ ಸೂಟ್‌ಗಳಂತೆ ಮೂರು ಅಂತಸ್ತುಗಳಲ್ಲಿ ಒಟ್ಟು ೧೫೦ ಸೂಟ್‌ಗಳಿರುವ ಮೂರು ಅತಿಥಿಗೃಹಗಳನ್ನು ನಿರ್ಮಿಸಲು ಯೋಜಿಸಲಾಗಿದ್ದು ಅತಿಥಿಗೃಹ ೧ ರಲ್ಲಿ ೧೦೮ ಸೂಟ್‌ಗಳನ್ನು ನಿರ್ಮಿಸಿ ದಾನಿಗಳಿಗೆ ನೀಡಲಾಗಿದೆ ಅತಿಥಿಗೃಹ ೨ ರಲ್ಲಿ ೧೫೦ ಸೂಟ್‌ಗಳನ್ನು ನಿರ್ಮಿಸಿ ೫೮ ಸೂಟ್‌ಗಳನ್ನು ದಾನಿಗಳಿಗೆ ನೀಡಲಾಗಿದೆ ಇಲ್ಲಿನ ಮಿಕ್ಕ ೯೨ ಸೂಟ್‌ಗಳೇ ಅಲ್ಲದೆ ಅತಿಥಿಗೃಹ ೩ ರಲ್ಲಿನ ೧೫೦ ಸೂಟ್‌ಗಳು ನಿರ್ಮಾಣದ ಕೊನೆಯ ಹಂತದಲ್ಲಿವೆ

ಈ ಮೂರು ಅತಿಥಿಗೃಹಗಳು ದೇವಾಲಯದ ಎದುರಿಗೆ ಅರ್ಧ ಫರ್ಲಾಂಗ್ ದೂರದಲ್ಲಿ ಬೇಡಿ ಆಂಜನೇಯಸ್ವಾಮಿ ದೇವಾಲಯದ ಹಿಂಭಾಗದಲ್ಲಿ ನೂತನ ಆಸ್ಥಾನ ಮಂಟಪದ ಪಕ್ಕದಲ್ಲಿವೆ ಪ್ರತಿ ಸೂಟ್‌ನ ಪ್ಲಿಂತ್ ಏರಿಯಾ ೪೪.೫ ಚದರಮೀಟರ್ ಆಗಿದ್ದು (ಸ್ನಾನ ಶೌಚಗೃಹಗಳೊಡನೆ), ಸಾಮಾನ್ಯ ಅಂಗಳವಿದೆ

ರೂ ೬೦,೦೦೦ ಮೊತ್ತದ ದಾನದಿಂದ ಒಂದು ಸೂಟ್ ಅನ್ನು ದಾನಿಗಳು ತಮ್ಮ ತಮ್ಮ ಹೆಸರಿನಲ್ಲಿ ನೀಡಬಹುದು

## ೩ ಸಪ್ತಗಿರಿ ಸತ್ರಗಳು

ಒಂದು ಕೇಂದ್ರ ವಿಭಾಗದ ಸುತ್ತ ೯ ವಿಭಾಗಗಳಿರುವಂತಹ ಒಂದು ಮಹತ್ ಯೋಜನೆಯನ್ನು ತಿ ತಿ ದೇ ಆರಂಭಿಸಿದೆ ೧ ಹಾಗೂ ೯ ನೇ ವಿಭಾಗಗಳು ಪ್ರವೇಶ ಹಾಗೂ ಉಪಹಾರಗೃಹಗಳಿಗಾಗಿ ಕೇಂದ್ರ ವಿಭಾಗವು ಅಷ್ಟ ಮುಖಗಳ ಅಂಗಳವನ್ನು ಹೊಂದಿದ್ದು ಎಂಟು ಮುಖಗಳಲ್ಲೂ ಒಂದೊಂದು ವಿಬಾಗ ನಿರ್ಮಾಣವಾಗುವುದು ಯಾವುದೇ ವಿಭಾಗಕ್ಕೂ ೧ನೇ ವಿಭಾಗದಿಂದ ಪ್ರವೇಶ ಮಿಕ್ಕ ವಿಭಾಗಗಳು ೨ ರಿಂದ ೮ (ಒಟ್ಟು ೭ ವಿಭಾಗ) ೯೫೪ ಕೋಣೆಗಳನ್ನು ಹೊಂದಿದ್ದು ೧೧ ಕೋಣೆಗಳು ಆಡಳಿತ ನಿರ್ವಹಣೆಗಾಗಿದ್ದು ಮಿಕ್ಕ ೯೪೩ ಕೋಣೆಗಳನ್ನು ಯಾರಿಕರಿಗೆ ನೀಡಲಾಗುವುದು ಮೊದಲ ಹಂತದಲ್ಲಿ ೨ ಹಾಗೂ ೩ನೇ ವಿಬಾಗಗಳ (೧೦೮ + ೧೪೯) ೨೫೭ ಕೋಣೆಗಳ ನಿರ್ಮಾಣವನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸುವ ಹಂತದಲ್ಲಿದೆ ಪ್ರತಿ ಕೋಣೆಯ ವಿಸ್ತೀರ್ಣ (ಸ್ನಾನ ಶೌಚಗಳೊಂದಿಗೆ) ೧೨'+೧೪' ರೂ ೪೦,೦೦೦ ಗಳ ದಾನದಿಂದ ದಾನಿಯು ತಮ್ಮ ಹೆಸರಿನಲ್ಲಿ ಕೋಣೆಯನ್ನು ನೀಡಬಹುದು ಈ ವರೆಗೆ ೮೦ ಕೋಣೆಗಳಿಗಾಗಿ ಆಂಶಿಕ ಹಾಗೂ ಪೂರ್ಣ ದಾನಗಳನ್ನು ಸ್ವೀಕರಿಸಲಾಗಿದೆ ಎರಡನೇ ವಿಭಾಗದ ಶೀಘ್ರ ಪೂರ್ಣತೆಯ ಬಳಿಕ ಅದನ್ನು ನೀಡಲಾಗುವುದು

## ೪ ಶೇಷಾದ್ರಿನಗರ ಅತಿಥಿಗೃಹ2

ಎರಡಂತಸ್ತಿನ ಈ ಅತಿಥಿಗೃಹದಲ್ಲಿ ೨೬ ಸೂಟ್‌ಗಳಿದ್ದು (ಪ್ರತಿ ಅಂತಸ್ತಿಗೆ ೧೩ ಸೂಟ್‌ಗಳು) ಯಾತ್ರಿಕರಿಗೆ ಬಾಡಿಗೆಯ ಮೇಲೆ ನೀಡಲಾಗುತ್ತದೆ ಪ್ರತಿ ಸೂಟ್ ೪.೨ ಮೀ X ೪.೨ ಮೀ ಇರುತ್ತದೆ

ಇಡೀ ಅತಿಥಿಗೃಹಕ್ಕಾಗಿ ಅಥವಾ ಪ್ರತಿ ಅಂತಸ್ತಿಗಾಗಿ ದಾನಗಳಿಗೆ ಆದ್ಯತೆ ನೀಡಲಾಗುವುದು

೨೫ ಲಕ್ಷ ರೂಗಳ ದಾನದಿಂದ ವ್ಯಕ್ತಿ, ವ್ಯಕ್ತಿಗಳು ಸಂಸ್ಥೆ, ಕಂಪನಿ, ಟ್ರಸ್ಟ್, ಇಡೀ ಅತಿಥಿಗೃಹದ ದಾನಿಗಳಾಗಲು ಸಾಧ್ಯ

ದಾನಿಗಳಿಗೆ ಸೌಲಭ್ಯಗಳು ದಾನಿಗಳು ತಮ್ಮ ಜೀವನಾವಧಿಯಲ್ಲೂ, ಕಂಪನಿ, ಇತ್ಯಾದಿಗಳು ೧೫ ವರ್ಷಗಳೂ ವರ್ಷಕ್ಕೆ ೬೦ ದಿನ (ಒಮ್ಮೆ ೧೦ ದಿನಗಳಿಗೆ ಮೀರದಂತೆ) ತಮ್ಮ ದಾನದ ಕಾಟೇಜು, ಸೂಟು, ಕೋಣೆಗಳಲ್ಲಿ ನಾಮಮಾತ್ರಸೇವಾ ಶುಲ್ಕದಿಂದ ಇರಬಹುದು ದಾನಿಗಳ ಹೆಸರು ವಿಳಾಸಗಳನ್ನು ಶಿಲಾಫಲಕದಲ್ಲಿ ಕೆತ್ತಿಸಿ ದಾನದ ಕೊಠಡಿ, ಸೂಟ್‌ಗಳಲ್ಲಿ ಪ್ರದರ್ಶಿಸಲಾಗಿರುವುದು

ಮಿಕ್ಕ ವಿವರಗಳಿಗಾಗಿ ಕೂಡಲೇ ಬರೆಯಿರಿ **ಕಾರ್ಯನಿರ್ವಹಣಾಧಿಕಾರಿ**, ತಿ ತಿ ದೇ ತಿರುಪತಿ

# ಹರೇರ್ನಾಮೈವ ಕೇವಲಂ

—ನರಸಿಂಹ ಬ್ರಹ್ಮಚಾರಿ.

ಮಾಯಾಮಯವಾದ ಸಂಸಾರದಲ್ಲಿ ಪತಿತರಾಗಿ ...ಮೃತ್ಯು, ಜರಾ, ವ್ಯಾಧಿ, ದುಃಖ, ಶೋಕಗಳನ್ನು ...ಭವಿಸುತ್ತಾ ನಿತ್ಯ ಸಂಪತ್ತಿಯಾದ ಪರಮಾರ್ಥ ...ನ ವಂಚಿತರಾದ ಜೀವಾತ್ಮರನ್ನು ಉದ್ಧರಿಸುವ ...ವಾಗಿ ಭಗವಂತನು ಸೃಷ್ಟಿಯ ಆದಿಯಿಂದ ...ಾದಿ ಮಹಾಪುರುಷರ ಹೃದಯಗಳಲ್ಲಿ ವಿಪುಲ ...ನ ವೇದಶಾಸ್ತ್ರಗಳನ್ನು ಪ್ರಕಟಿಸಿದನು. ಅಪೌ...ೇಯವಾದ ಈ ವೇದಶಾಸ್ತ್ರಗಳೇ ಸನಾತ...ರ್ಮದ ಭದ್ರವಾದ ಅಡಿಗಟ್ಟು. ಅಪರೋ...ದ ವೇದಾರ್ಥಗಳನ್ನು ಸಕಲ ಮಾನವರಿಗೂ ...ಜವಾಗಿ ಬೋಧಿಸುವ ಸಲುವಾಗಿ ಭಗವಾನ್ ...ವ್ಯಾಸರು ವೇದಾರ್ಥಪೂರಕವಾದ ಪುರಾಣಗ...ನ್ನು ಸೃಷ್ಟಿಸಿದರು. ಅಸೀಮವಾಗಿರುವ ವೇದ, ...ಾಂತ, ಉಪನಿಷತ್ತು, ಪಂಚರಾತ್ರ, ಧರ್ಮ...ಸ್ತ್ರ, ಪುರಾಣ ಇತ್ಯಾದಿಗಳಲ್ಲಿ ಕಂಡುಬರುವ ಅಸಂ...ವಾದ ನಿರ್ದೇಶಗಳಲ್ಲಿ ನಿಹಿತವಾಗಿರುವ ವಿಧಿ...ಗೂ ನಿಷೇದಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ... ಭಗವಂತನ ನಿತ್ಯಸ್ಮರಣೆಯೇ ಮೂಲಭೂತ...ನ ವಿಧಿಯಾಗಿದ್ದು ಭಗವಂತನ ವಿಸ್ಮರಣೆಯೇ ...ಾನವಾದ ನಿಷೇಧವಾಗಿರುವ ತಾತ್ಪರ್ಯವನ್ನು ...ಬಹುದು. ಪದ್ಮಪುರಾಣವು ತಿಳಿಸುವಂತೆ---

ಸ್ಮರ್ತವ್ಯ ಸತತಂ ವಿಷ್ಣುರ್ವಿ
ಸ್ಮರ್ತವ್ಯೋ ನ ಜಾತುಚಿತ್
ಸರ್ವೇ ವಿಧಿನಿಷೇಧಾ
ಸ್ಯುರೇತಯೋರೇವ ಕಿಂಕರಾ

...ಅರ್ಥಾತ್, ಪರಮಪುರುಷನಾದ ವಿಷ್ಣುವಿನ ...ತವಾದ ಸ್ಮರಣೆಯೇ ಮಾನವರ ಕರ್ತವ್ಯವಾ...ಲ್ಲಿ ಭಗವಂತನನ್ನು ಎಂದಿಗೂ ಮರೆಯಲಾ...ಿ ಶಾಸ್ತ್ರಗಳಲ್ಲಿ ತಿಳಿಸಲ್ಪಟ್ಟ ಮಿಕ್ಕ ಸಮಸ್ತ ...---ನಿಷೇಧಗಳು ಈ ಎರಡು ಮಾತುಗಳ ಅನು...ವಾಗಿವೆ. ಶ್ರೀ ಪುರಂದರ ದಾಸರ ಮಾತಿನಂತೆ, ...ರೆಯಬೇಡ ಮನವೆ ನೀನು ಹರಿಯ ನಾಮಸ್ಮ...ಿಯಾ"

ಅನಾದಿಕರ್ಮವಾಸನೆಯಿಂದ ಬದ್ಧರಾದ ಪತಿತ...ವರು ಜನ್ಮಜನ್ಮಾಂತರಗಳಿಂದ ಮಾಯಾಜಗ... ಸ್ಮರಣೆಯಲ್ಲಿಯೇ ನಿತ್ಯಕಾಲವಾಗಿ ಮುಳುಗಿರುವುದರಿಂದ ಈ ಜೀವರಿಗೆ ಭಗವಂತನ ಸ್ಮರಣೆಯು ಅತ್ಯಂತವಾಗಿ ಕಷ್ಟಸಾಧ್ಯವಾದುದಾಗಿದೆ. ಉಚಿತವಾದ ದಿಗ್ದರ್ಶನ, ಉದಾಹರಣೆ ಹಾಗೂ ಆಶ್ರಯಗಳು ದೊರಕದಿದ್ದಲ್ಲಿ ಈ ಬದ್ಧಜೀವರು ಮಾಯಾಮೋಹದ ಕಾರಣವಾಗಿ ಎಂದಿಗೂ ಪರಮಾರ್ಥವನ್ನು ಗಳಿಸಲಾರರು. ಕಲಿಯುಗದ ಮಾನವರಂತೂ ಅನಾಚಾರ, ಅಧರ್ಮ, ಅಜ್ಞಾನ, ನಾಸ್ತಿಕತೆ, ಸದ್ಗುರುವಿನ ಅಭಾವ -- ಇತ್ಯಾದಿಗಳಿಂದ ಪೂರ್ಣವಾಗಿ ಭಗವದ್ವಿಮುಖರಾಗಿದ್ದಾರೆ. ವಿಭಿನ್ನ ಯುಗದ ಮಾನವರ ಶ್ರೇಯಸ್ಸಿನ ಸಲುವಾಗಿ ಶಾಸ್ತ್ರಗಳು ಭಿನ್ನಭಿನ್ನವಾದ ಯುಗಧರ್ಮಗಳನ್ನು ಪ್ರಚಾರಿಸಿವೆ. ಸತ್ಯಯುಗದ ಯುಗಧರ್ಮವು ಭಗವಂತನ ಧ್ಯಾನವಾಗಿದ್ದಲ್ಲಿ ತ್ರೇತಾಯುಗದಲ್ಲಿ ಅದು ಯಜ್ಞದ ರೂಪವನ್ನು ಗಳಿಸಿತು. ದ್ವಾಪರಯುಗದಲ್ಲಿ ಅರ್ಚನೆಯು ಯುಗಧರ್ಮವಾಗಿದ್ದಲ್ಲಿ ಕಲಿಯುಗದಲ್ಲಿ ಶ್ರೀ ಹರಿನಾಮ ಸಂಕೀರ್ತನೆಯು ಯುಗಧರ್ಮವಾಯಿತು.

ಬೃಹನ್ನಾರದೀಯ ಪುರಾಣದ ವಚನದಂತೆ,

ಹರೇರ್ನಾಮ ಹರೇರ್ನಾಮ
ಹರೇರ್ನಾಮೈವ ಕೇವಲಂ
ಕಲೌನಾಸ್ತ್ಯೇವ ನಾಸ್ತ್ಯೇವ
ನಾಸ್ತ್ಯೇವ ಗತಿರನ್ಯಥಾ

ಈ ಶ್ಲೋಕದ ತಾತ್ಪರ್ಯವೇನೆಂದರೆ, ಕಲಿಯುಗದಲ್ಲಿ ಜೀವಮಾತ್ರರ ಉದ್ಧಾರದ ಸಲುವಾಗಿ ಕೇವಲವಾಗಿ ಶ್ರೀಹರಿಯ ಚಿನ್ಮಯ ನಾಮವೇ ಗತಿಯಾಗಿರುತ್ತದೆ. ಇದರ ಹೊರತಾಗಿ ಈ ಯುಗದಲ್ಲಿ ಇತರ ಯಾವ ಸಾಧನಗಳೂ ಮಾನವರಿಗೆ ಸದ್ಗತಿಯನ್ನು ನೀಡಲಾರವು. 'ಹರೇರ್ನಾಮ' ಶಬ್ದವನ್ನು ಮೂರುಸಾರಿ ಉಪಯೋಗಿಸಿರುವುದರಿಂದ ಇತರ ದೇವತೆಗಳ ನಾಮಗಳು ಪರಮ ಫಲವನ್ನು ನೀಡಲಾರವೆಂದು ತಿಳಿಯುತ್ತದೆ. 'ನಾಸ್ತ್ಯೇವ' ಶಬ್ದವನ್ನು ಮೂರುಸಾರಿ ಪ್ರಯೋಗಿಸಿ ಇತರ ತರ್ಕಗಳನ್ನು ಖಂಡಿಸಲಾಗಿದೆ. ಹರಿನಾಮವನ್ನು ವರ್ಜಿಸಿದಲ್ಲಿ ಕಲಿಯುಗದಲ್ಲಿ ಯಾಗ, ಯೋಗ, ಸ್ವಾಧ್ಯಾಯ, ಧ್ಯಾನ, ದಾನ, ಮನನ ಇತ್ಯಾದಿ ಮಾರ್ಗಗಳೆಲ್ಲವೂ ವಿಫಲವಾಗಿವೆ. ಭಗವಂತನ ದಿವ್ಯನಾಮವೇ ಈ ಪ್ರಪಂಚದಲ್ಲಿ ಭಗವಂತನ ಪ್ರಥಮ ಪರಿಚಯವಾಗಿದೆ. ನಾಮ ರೂಪವಾದ ಮೊಗ್ಗು ಪ್ರಸ್ಫುಟಿತವಾಗಿ ಭಗವಂತನ ರೂಪ, ಗುಣ, ಲೀಲೆ, ಧಾಮ ಇತ್ಯಾದಿಗಳು ಭಕ್ತರ ಹೃದಯಗಳಲ್ಲಿ ಪ್ರಕಾಶಿತವಾಗಿ ಅವರಿಗೆ ಅಶೋಕ, ಅಭಯ, ಅಮೃತಗಳನ್ನು ನೀಡುತ್ತವೆ. ಆ ಬ್ರಹ್ಮಸ್ತಂಬ ಪರ್ಯಂತವಾಗಿ ಸರ್ವವೂ ಮಾಯಾ ಮಯವಾದ ಈ ಜಗತ್ತಿನಲ್ಲಿ ಶ್ರೀ ಹರಿನಾಮವೇ ಸಚ್ಚಿದಾನಂದಮಯ ತತ್ತ್ವವಾಗಿರುತ್ತದೆ. ಭಗವಂತನೂ, ಭಗವಂತನ ನಾಮವೂ ಪರಸ್ಪರ ಅಭಿನ್ನವಾಗಿರುವುದಾಗಿ ಸನಾತನ ಶಾಸ್ತ್ರಗ್ರಂಥಗಳು ಘೋಷಿಸುತ್ತವೆ. ಹರಿನಾಮದ ಮಾಹಾತ್ಮ್ಯಗಳನ್ನು ಸೂಚಿಸುವ ಶ್ಲೋಕಗಳು ಶಾಸ್ತ್ರಗಳಲ್ಲಿ ಅಸಂಖ್ಯಾಗಿವೆ. ಕಲಿಸಂತರಣ ಉಪನಿಷತ್ತು ಕಲಿಯುಗದ ಸಲುವಾಗಿ ಕೇವಲವಾಗಿ ಹರಿನಾಮ ಮಹಾಮಂತ್ರವನ್ನೇ ಸಾಧನವಾಗಿ ವಿಧಿಸುತ್ತದೆ. ಇತರ ಯುಗಗಳಲ್ಲಿಯೂ ಹರಿನಾಮವು ಸಾಧನವಾಗಿದ್ದಲ್ಲಿ ಕಲಿಯುಗದಲ್ಲಿ ಇದು ಸಾರ್ವಭೌಮ ಸ್ಥಾನವನ್ನು ಗಳಿಸಿರುತ್ತದೆ. ಕಲಿಯುಗದ ಬಲಶಾಲಿಯಾದ ಈ ಹರಿನಾಮರೂಪದ ಔಷಧಿಯೇ ಸಾಧನವಾಗಿರುತ್ತದೆ. ಇತರ ಸಾಧನಗಳು ಕಲಿಯುಗದ ಜೀವರ ಭವರೋಗವನ್ನು ತೊಲಗಿಸಲಾರವು.



ಸ್ಕಂದ ಪುರಾಣದ ವಚನದಂತೆ, --

ದಾನವ್ರತತಪಸ್ತೀರ್ದ
ಯಾತ್ರಾದೀನಾಂಚ ಯ ಸ್ಥಿತಾ
ಶಕ್ತಯೋ ದೇವಮಹತಾಂ
ಸರ್ವಪಾಪಹರಾ ಶುಭಾ
ರಾಜಸೂಯಾಶ್ವಮೇಧಾನಾಂ
ಜ್ಞಾನಸ್ಯಾದ್ಯಾತ್ಮವಸ್ತುನ
ಆಕೃಷ್ಯ ಹರಿಣಾ ಸರ್ವಾ
ಸ್ಥಾಪಿತಾ ಸ್ವೇಷು ನಾಮಸು

"ದಾನ, ವ್ರತ, ತಪಸ್ಸು, ತೀರ್ದಯಾತ್ರೆ, ದೇವತೆಗಳು, ರಾಜಸೂಯಯಜ್ಞ, ಅಶ್ವಮೇದಯಜ್ಞ, ಹಾಗೂ ಇತರ ಅದ್ಯಾತ್ಮಿಕವಸ್ತುಗಳಲ್ಲಿ ನಿಹಿತವಾಗಿದ್ದ ಶುಭತ್ವವನ್ನೂ ಪಾಪಹರಣ ಶಕ್ತಿಗಳನ್ನೂ ಶ್ರೀಹರಿಯು ಆಕರ್ಷಿಸಿ ಅವುಗಳನ್ನು ತನ್ನ ಮುಖ್ಯ ನಾಮಗಳಲ್ಲಿ ಸ್ಥಾಪಿತಗೊಳಿಸಿರುವನು"

ಆಕಾಶದಲ್ಲಿ ಸೂರ್ಯನು ಉದಯಿಸಿದ ನಂತರ ಇತರ ದೀಪಗಳು ಕ್ಷೀಣಪ್ರಭವಾಗುವ ರೀತಿಯಲ್ಲಿ, ಸಕಲರಿಗೂ ಮೂಲವಾಗಿರುವ ಹರಿನಾಮದ ಉದಯದಲ್ಲಿ ಇತರ ಸಾದನಗಳೆಲ್ಲವೂ ವ್ಯರ್ದವಾಗುತ್ತವೆ ಸೂರ್ಯನ ಎದುರಿನಲ್ಲಿ ದೀಪಗಳನ್ನು ಉಪಯೋಗಿಸುವವರು ಮೂರ್ಖರಾಗಿರುವಂತೆಯೇ ಶ್ರೀಹರಿನಾಮವನ್ನು ಬಿಟ್ಟು ಇತರ ಸಾದನೆಗಳನ್ನು ಅವಲಂಬಿಸುವವರು ಕಲಿಯುಗದಲ್ಲಿ ಕೇವಲವಾಗಿ ಬುದ್ಧಿಹೀನರಾಗಿರುತ್ತಾರೆ ಕಲಿಯುಗದಲ್ಲಿ ಸಮಸ್ತ ಇತರ ಸಾದನೆಗಳನ್ನು ಹರಿನಾಮದ ಸಂಗಡವೇ ಪ್ರಯೋಗಿಸಬೇಕಾಗಿ ಶಾಸ್ತ್ರಗಳ ಆದೇಶವಾಗಿದೆ ನಾಮಸಂಕೀರ್ತನೆಯ ಮೂಲಕವಾಗಿ ಸಮಸ್ತ ಜೀವಜಾತಿಯನ್ನು ಉದ್ಧರಿಸುವ ಸಲುವಾಗಿ ಭಗವಂತನು ತನ್ನ ನಾಮವನ್ನು ಸಕಲ ನಿಯಮಗಳಿಗೆ ಅತೀತವಾಗಿ ಇರಿಸಿರುವನು ಕರ್ಮಮಾರ್ಗದ ಹಾಗೂ ಜ್ಞಾನಮಾರ್ಗದ ಸಾದನೆಗಳೆಲ್ಲವೂ ಅಸಂಖ್ಯವಾದ ನಿಬಂದನೆಗಳಿಗೆ ಒಳಗೊಂಡಿರುವಲ್ಲಿ ಕೇವಲವಾಗಿ ಈ ನಾಮಸಾದನೆಯು ಮಾತ್ರವೇ ದೇಶ, ಕಾಲ, ಪಾತ್ರಗಳ ನಿರ್ಬಂದಗಳಿಗೆ ಅತೀತವಾಗಿ ಸರ್ವದೇಶಗಳಲ್ಲಿಯೂ, ಸರ್ವಕಾಲಗಳಲ್ಲಿಯೂ, ಸರ್ವ ಮಾನವರಿಂದಲೂ ಸಾಧಿಸಬಹುದಾಗಿದೆ ಭಗವಂತನ ನಾಮದ ಮಹಿಮೆಯು ಅನಂತವಾದುದು ಶಾಸ್ತ್ರಗಳಲ್ಲಿ ಮುಖ್ಯವಾಗಿ ಕಂಡುಬರುವ ವಿಶೇಷಗಳೇನೆಂದರೆ, ಕಲಿಯುಗದಲ್ಲಿ ಶ್ರೀಹರಿನಾಮವು ಭವರೋಗದ ಏಕೈಕ ಔಷದಿಯಾಗಿದ್ದು ಸಮಸ್ತ ಕಲಿದೋಷಗಳನ್ನು ನಾಶಗೊಳಿಸುತ್ತದೆ ಎಲ್ಲವಿದವಾದ ಪ್ರಾಯಶ್ಚಿತ್ತಗಳಲ್ಲಿ ಶ್ರೀಹರಿನಾಮವು ಪರಮಪ್ರಾಯಶ್ಚಿತ್ತವಾಗಿದೆ ಸೂರ್ಯನ ಬೆಳಕು ಕತ್ತಲೆಯನ್ನು ನಾಶಗೊಳಿಸುವಂತೆ ಕೇವಲ ಒಂದು ಹರಿನಾಮವು ಜನ್ಮಜನ್ಮಾಂತರಗಳ ಪಾಪಗಳನ್ನು ಧ್ವಂಸಗೊಳಿಸುತ್ತದೆ ಶ್ರೀಕೃಷ್ಣನಾಮದ ಮುಖ್ಯಫಲವಾಗಿ ಭಕ್ತರು ಪರಮ ಪುರುಷಾರ್ದವಾದ ಕೃಷ್ಣಪ್ರೇಮವನ್ನು ಗಳಿಸುತ್ತಾರೆ ಪಾಪಸಂಹಾರವನ್ನು ಹರಿನಾಮದ ಗೌಣಫಲವಾಗಿಯೇ ಪಡೆಯಬಹುದು ಇದನ್ನು ಅಜಾಮಿಳನ ದೃಷ್ಟಾಂತದಲ್ಲಿ ಪುರಾಣಗಳಲ್ಲಿ ವಿವರಿಸಲಾಗಿದೆ ಸಾಂಕೇತ್ಯ ಪಾರಿಹಾಸ್ಯ ಸ್ತೋಬ ಹಾಗೂ ಹೇಳನವೆಂದು ಹೆಸರಾದ ನಾಲ್ಕು ವಿದವಾದ ನಾಮಾಭಾಸಗಳ ಮೂಲಕವಾಗಿಯೇ ಮಾನವರ ಪಾಪಗಳೆಲ್ಲವೂ ನಷ್ಟವಾಗಿ ಮುಕ್ತಿಯು ಲಭಿಸುತ್ತದೆ ದುಷ್ಕರ್ಮಗಳ ಫಲವಾಗಿ ಜಗತ್ತಿನಲ್ಲಿ ರೋಗ, ಅಪಾಯ, ಭೂತಾದಿಗಳ ಬಾದೆಗೊಳಪಟ್ಟ ಮನುಷ್ಯರು ನಾಮದ ಕೃಪೆಯಿಂದ ಮುಕ್ತರಾಗುತ್ತಾರೆ ಹರಿನಾಮದ ಪ್ರಭಾವದಿಂದ ಪ್ರಾರಬ್ಧಕರ್ಮವು ಕೂಡ ವಿನಷ್ಟವಾಗುತ್ತದೆ ಇದನ್ನು ಶ್ರೀಮದ್ಭಾಗವತದಲ್ಲಿ ಕಾಣಿಸಲಾಗಿದೆ ಸಾಂದೀಪನೀ ಮುನಿಯ ಪುತ್ರನನ್ನು ಮೃತ್ಯುವಿನಿಂದ ತಿರುಗಿ ತರಿಸಿ ಪುನರ್ಜೀವನವನ್ನು ದಯಪಾಲಿಸಿ ಶ್ರೀಕೃಷ್ಣನು ಆತನ ಪ್ರಾರಬ್ಧಕರ್ಮವನ್ನು ಪರಿವರ್ತಿಸಿರುವನು ಶ್ರೀಹರಿನಾಮದ ಫಲವಾಗಿ ಸಮಸ್ತ ಅಭಾವಗಳೂ ತ್ರುಟಿಗಳೂ ಪೂರ್ಣಗೊಳ್ಳುತ್ತವೆ ದ್ವಾದಶ ಮಹಾ ಜನರಲ್ಲಿ ಒಬ್ಬನಾದ ಯಮಧರ್ಮರಾಜನು ತನ್ನ ದೂತರಿಗೆ ಉಪದೇಶವನ್ನು ನೀಡುತ್ತ ನುಡಿದನು (ಭಾಗವತ 6--3--22) "ಶ್ರೀಹರಿಯ ನಾಮ ಗ್ರಹಣಾದಿ ರೂಪವಾದ ಭಕ್ತಿಯೋಗವೇ ಜೀವಮಾತ್ರರಾದವರ ಪರಮ ಧರ್ಮವೆಂಬುದಾಗಿ ಉಕ್ತವಾಗಿದೆ"

ಶ್ರೀ ಚೈತನ್ಯಮಹಾಪ್ರಭುವು ತನ್ನ ಶಿಕ್ಷಾಷ್ಟಕದ ಪ್ರಥಮ ಶ್ಲೋಕದಲ್ಲಿ ಶ್ರೀಕೃಷ್ಣನಾಮ ಸಂಕೀರ್ತನದ ಸಪ್ತವಿದ ಫಲದ ವಿಷಯವಾಗಿ ತಿಳಿಸಿದ್ದಾರೆ ಇವುಗಳೇನೆಂದರೆ, ---ಪ್ರಥಮವಾಗಿ ಶ್ರೀಕೃಷ್ಣನಾಮವು ಚಿತ್ತರೂಪವಾದ ದರ್ಪಣದ ಮಲಿನತೆಯನ್ನು ಹೋಗಲಾಡಿಸಿ ನಿರ್ಮಲವಾದ ಹೃದಯದಲ್ಲಿ ತತ್ವವಸ್ತುವನ್ನು ಪ್ರತಿಬಿಂಬಿಸುತ್ತದೆ ದ್ವಿತೀಯ ಫಲವಾಗಿ ಮಹಾದಾವಾಗ್ನಿರೂಪವಾದ ಸಂಸಾರ ಯಾತನೆಯನ್ನು ಭಗವನ್ನಾಮವು ನಿರ್ಮೂಲಗೊಳಿಸುತ್ತದೆ ನಿತ್ಯಶ್ರೇಯಸ್ಸಿನ ಅಭ್ಯುದಯವೇ ಶ್ರೀಹರಿನಾಮ ಈ ಹರಿನಾಮದಲ್ಲಿ ಅನುರಾಗವುಳ್ಳವರೇ

ಮದಾರ್ದ್ರವಾದ ಜ್ಞಾನಿಗಳಾಗಿರುವರು ಅನುಕ್ಷಣ ವಾಗಿ ವರ್ಧಿತವಾಗುವ ಆನಂದವೆಂಬ ಮಹಾಸಾಗ ರವೇ ಕೃಷ್ಣನಾಮದ ಪಂಚಮ ಫಲವಾಗಿದೆ ಷಷ್ಠ ಫಲವಾಗಿ ಭಗವಂತನ ನಾಮದ ಪ್ರತಿಯೊಂದು ಅಕ್ಷರವೂ ಪರಿಪೂರ್ಣವಾದ ಅಮೃತದ ಆಸ್ವಾದನೆ ಯನ್ನು ನೀಡುತ್ತದೆ ನಾಮಸಂಕೀರ್ತನೆಯ ಸಪ್ತಮ ಫಲವಾಗಿ ಭಕ್ತನ ತನು, ಮನ, ಪ್ರಾಣ ಇತ್ಯಾದಿಗ ಳೆಲ್ಲವೂ ಶಾಂತಿ -- ಶೀತಲತೆಗಳನ್ನು ಹೊಂದುತ್ತವೆ ಈ ವಿದವಾದ ಶ್ರೀಕೃಷ್ಣನಾಮವು ಪರಮಜಯ ಯುಕ್ತವಾಗಲಿ

ಪ್ರೇಮಭಕ್ತನ ಸ್ವಭಾವವನ್ನು ವರ್ಣಿಸುತ್ತ ಭಾಗ ವತವು (11--2--40) ಈ ರೀತಿಯಾಗಿ ತಿಳಿಸು ತ್ತದೆ, -- 'ಶ್ರೀಕೃಷ್ಣಸೇವೆಯನ್ನೇ ತನ್ನ ಜೀವನದ ವ್ರತ ವಾಗಿ ಸ್ವೀಕರಿಸಿದ ಪುರುಷನು ಅವಶಚಿತ್ತನಾಗಿ ತನ್ನ ಪ್ರಿಯತಮನಾದ ಶ್ರೀಕೃಷ್ಣನ ನಾಮಕೀರ್ತನ ದಲ್ಲಿ ಅನುರಕ್ತನಾಗಿ ಕರಗಿದ ಹೃದಯದಿಂದ ಉನ್ಮ ತ್ತನಾಗಿ ಜಗತ್ತಿನ ಅಪೇಕ್ಷೆಯಿಂದ ಮುಕ್ತನಾಗಿ ಕೆಲವು ಸಾರಿ ಹಾಸ್ಯವನ್ನೂ, ಕೆಲವುಸಾರಿ ರೋದನವನ್ನೂ, ಆಗಾಗ ಚೀತ್ಕಾರವನ್ನೂ, ಗಾನ--ನೃತ್ಯಾದಿಗಳನ್ನೂ ಮಾಡುವನು ಈ ವಿಧವಾದ ಶ್ರೀಕೃಷ್ಣನಾಮದ ಅಸೀಮಮಹಿಮೆಯನ್ನು ಶ್ರೀ ಲಕ್ಷ್ಮೀದರಸ್ವಾಮಿಯು ತನ್ನ ನಾಮಕೌಮುದೀ ಗ್ರಂದದಲ್ಲಿ ಈ ವಿಧವಾಗಿ ವರ್ಣಿಸಿರುವರು, -- 'ಈ ದಿವ್ಯಕೃಷ್ಣನಾಮವು ಬಹು ಸುಕೃತಿಶೀಲರಾದ ಸಾದುಗಳ ಮನಸ್ಸುಗಳ ಆಕ ರ್ಷಕ ಸ್ವರೂಪವೂ, ಪಾಪನಾಶಕವೂ, ಚಂಡಾಲ ರಿಂದ ಮೊದಲಾಗಿ ಎಲ್ಲರಿಗೂ ಸುಲಭವಾಗಿದ್ದು ಮುಕ್ತಿರೂಪವಾದ ಐಶ್ವರ್ಯವನ್ನು ವಶಗೊಳಿಸು ವುದೂ ಆಗಿದೆ ಈ ವಿದವಾದ ಶ್ರೀಕೃಷ್ಣನಾಮ ಮಹಾಮಂತ್ರವು ಸಾದಕನ ನಾಲಿಗೆಯನ್ನು ಸ್ಪರ್ಶಿ ಸಿದ ಮಾತ್ರದಿಂದಲೇ ಫಲವನ್ನು ನೀಡುತ್ತದೆ ಇದ ಕ್ಕಾಗಿ ದೀಕ್ಷೆ, ಪುರಶ್ಚರಣ ಮೊದಲಾದ ಅನುಷ್ಠಾನ ಗಳು ಕೂಡ ಅವಶ್ಯವಾಗಿರುವುದಿಲ್ಲ'

ಶ್ರೀಕೃಷ್ಣನಾಮದ ಸ್ವರೂಪವನ್ನು ಪುರಾಣಗಳಲ್ಲಿ ಪದ್ಮಪುರಾಣ, ವಿಷ್ಣುದರ್ಮೋತ್ತರ) ಈ ವಿಧವಾಗಿ ವರ್ಣಿಸಲಾಗಿದೆ, ---

ನಾಮ ಚಿಂತಾಮಣಿ  
ಕೃಷ್ಣಶ್ಚೈತನ್ಯರಸ ವಿಗ್ರಹ  
ಪೂರ್ಣ ಶುದ್ಧೋ ನಿತ್ಯ ಮುಕ್ತೋ  
ಅಭಿನ್ನತ್ವಾನ್ನಾಮನಾಮಿನ

ಕೋರಿದ ವರಗಳನ್ನೆಲ್ಲ ನೀಡುವ ಚಿಂತಾಮ ಣಿಯಾಗಿರುವ ಈ ಕೃಷ್ಣನಾಮವು ಚಿನ್ಮಯವಾ ದುದೂ, ಆನಂದಮಯವಾದ ವಿಗ್ರಹದಿಂದ ಕೂಡಿ ರುವುದೂ, ಪರಿಪೂರ್ಣವಾದುದೂ, ಮಾಯಾತೀತ ವಾದುದೂ, ಅಪ್ರಾಕೃತವಾದುದೂ ತಗಿದ್ದು ಪುರು ಷೋತ್ತಮನಾದ ಶ್ರೀಕೃಷ್ಣನಿಂದ ಅಭಿನ್ನವಾದುದಾ ಗಿದೆ ಸರ್ವಶಕ್ತಿಮಂತವಾದ ದಿವ್ಯ ಭಗವನ್ನಾ ಮದ ಮಹಿಮೆಯನ್ನು ವೇದಶಾಸ್ತ್ರಗಳು ಕೋಟಿಕಂ ಠಗಳಿಂದ ಘೋಷಿಸಿಯೂ ಮುಗಿಸಲಾರವು ಭಗ ವಂತನ ನಾಮಗಳು ಮುಖ್ಯನಾಮ ಹಾಗೂ ಗೌಣ ನಾಮಗಳೆಂದು ಎರಡು ವಿಧವಾದವು ಕೃಷ್ಣ, ಗೋವಿಂದ, ಗೋಪೀನಾಥ, ವಾಸುದೇವ, ನಾರಾ ಯಣ, ರಾಮ, ದೇವಕೀನಂದನ ಇತ್ಯಾದಿಗಳು ಮುಖ್ಯನಾಮಗಳಾಗಿದ್ದು, ಈಶ್ವರ, ಬ್ರಹ್ಮ, ಅಸೀಮ, ಅವ್ಯಕ್ತ ಇತ್ಯಾದಿ ನಾಮಗಳು ಗೌಣನಾಮಗಳಾಗಿವೆ ಶಾಸ್ತ್ರಗಳಲ್ಲಿ ವರ್ಣಿಸಲಾದ ನಾಮಮಹಿಮೆಗಳು ಈ ಮುಖ್ಯನಾಮಗಳಿಗೆ ಹೊಂದಿರುತ್ತವೆ ಮಾನವರು ನುಡಿಯುವ ಮಾತುಗಳಲ್ಲಿ ಪ್ರತಿಯೊಂದು ಶಬ್ದವೂ ಶಬ್ದಶಕ್ತಿಯಿಂದ ಕೂಡಿರುವುವುದಾದರೂ, ಜಾಗ ತಿಕ ಶಬ್ದಗಳ ಶಕ್ತಿಯು ಅತ್ಯಂತ ಸೀಮಿತವಾಗಿದ್ದು ಇದನ್ನು ಆದುನಿಕೀ ಶಕ್ತಿಯೆಂದು ಕರೆಯಲಾಗು ತ್ತದೆ ಆದರೆ ಭಗವಂತನ ನಾಮವು ನಿತ್ಯಸಿದ್ಧವಾದ ಆಜಾನಿಕೀ ಶಕ್ತಿಯಿಂದಕೂಡಿದೆ ಉದಾಹರಣೆ ಗಾಗಿ ಬಾಯಾರಿಕೆಯಿಂದ ತಲ್ಲಣಿಸುವ ರೋಗಿಯು 'ನೀರು- ನೀರು' ಎಂದು ಉಚ್ಚರಿಸಿದಾಗ ಈ ಶಬ್ದದ ಅರ್ದವನ್ನು ತಿಳಿದ ಯಾರಾದರೂ ಒಬ್ಬರು ಅಲ್ಲಿಗೆ ಬಂದು ಉದಾರಹೃದಯದಿಂದ ರೋಗಿಗೆ ನೀರನ್ನು ಕೊಡಬಹುದು ಇದರಲ್ಲಿ ಭಾಷಾಜ್ಞಾನ, ಸಹೃದ ಯತೆ, ನೀರಿನ ಪ್ರಾಪ್ತಿ ಇವೆಲ್ಲವೂ ಇದ್ದಲ್ಲಿ ಮಾತ್ರವೇ ಈ ಶಬ್ದವು ಫಲದಾಯಕವಾಗುತ್ತದೆ ಆದರೆ, ಭಗವಂತನ ನಾಮವೂ, ಭಗವಂತನೂ ಏಕವ ಸ್ತುವಾದುದರಿಂದ ಮನೋವಾಕ್ಕಾಯಗಳ ಐಕ್ಯದ ಮೂಲಕವಾಗಿ ಅರ್ತಿಯಿಂದ ಉಚ್ಚರಿಸಿದ ಭಗವ ನ್ನಾಮದ ಫಲವಾಗಿ ಇತರ ವಸ್ತುಗಳ ಅಪೇಕ್ಷೆ ಯಿಲ್ಲದೆ ಭಗವಂತನು ಅಲ್ಲಿ ಪ್ರತ್ಯಕ್ಷನಾಗಿ ಭಕ್ತರನ್ನು ಉದ್ಧರಿಸುವನು ಇದನ್ನು ಭಕ್ತರಾದ ದ್ರೌಪದಿ, ಗಜೇಂದ್ರ, ಪ್ರಹ್ಲಾದ, ಮೀರಾಬಾಯಿ, ಪುರಂದರದಾ ಸರು, ತುಲಸೀದಾಸರು ಮೊದಲಾದವರ ಜೀವನಗ ಳಲ್ಲಿ ಕಾಣಬಹುದು

ಭಗವನ್ನಾಮವು ಸರ್ವಶಕ್ತಿಗಳಿಂದ ಕೂಡಿರುವು ದಾಗಿಯೂ ಸಾಧಾರಣವಾಗಿ ಈ ನಾಮದ ಫಲವು ಸಾದಾರಣ ಮಾನವರಲ್ಲಿ ಕಂಡುಬರುವು ದಿಲ್ಲ ಇದರ ಕಾರಣವನ್ನು ಸ್ಪಷ್ಟಗೊಳಿಸುತ್ತ ಶಾಸ್ತ್ರಗಳು ತಿಳಿಸುವುದೇನೆಂದರೆ, ಹರಿನಾಮವನ್ನು ಉಚ್ಚರಿಸುವ ಸಮಯದಲ್ಲಿ ಸಾಧಕರ ಹೃದಯ ಗಳು ದಶವಿಧವಾದ ಅಪರಾಧಗಳಿಂದ ಕೂಡಿದ್ದಲ್ಲಿ ನಾಮದ ಕೃಪೆಯಿಂದ ಅವರು ವಂಚಿತರಾಗುತ್ತಾರೆ ಉದಾಹರಣೆಗಾಗಿ, ಭೂಮಿಯಿಂದ ಸುಮಾರು ಒಂಭತ್ತು ಕೋಟಿ ಮೈಲುಗಳಷ್ಟು ದೂರದಲ್ಲಿರುವ ಸೂರ್ಯನು ಸಮಸ್ತ ಸೌರಮಂಡಲಕ್ಕೆ ಬೇಕಾದ ತಾಪವನ್ನೂ ಪ್ರಕಾಶವನ್ನೂ ನೀಡುವ ಶಕ್ತಿಯಿಂದ ಕೂಡಿದ್ದರೂ, ನಮ್ಮ ಕಣ್ಣುಗಳನ್ನು ಮೋಡಗಳು ಆವರಿಸಿದಲ್ಲಿ ನಾವು ಸೂರ್ಯನ ತಾಪದಿಂದಲೂ, ಪ್ರಕಾಶದಿಂದಲೂ ವಂಚಿತರಾಗುತ್ತೇವೆ ಭೂಮಿ ಯಿಂದ ಕಲವುಮೈಲುಗಳೊಳಗೆ ಇರುವ ಮೋಡ ಗಳು ಭೂಮಿಯನ್ನು ಆವರಿಸಬಲ್ಲವು ಆದರೆ ಅವು ಸೂರ್ಯನನ್ನು ಆವರಿಸಲಾರವು ಈ ನಾಮಾಪ ರಾದಗಳು ಜೀವಾತ್ಮನ ಪಕ್ಷದಲ್ಲಿ ದುರ್ಭೇದ್ಯರೂಪ ವಾಗಿವೆ ಅತ್ಯಂತ ದುರ್ಲಭವಾದುದು ಈ ನರ ಜನ್ಮವು ಅತ್ಯಂತ ಕೃಪೆಯಿಂದ ಕೂಡಿದುದು ಶ್ರೀಹ ರಿನಾಮವು ಕಲಿಯುಗದಲ್ಲಿ ಈ ಹರಿನಾಮವನ್ನು ಬಿಟ್ಟಲ್ಲಿ ಜೀವರ ಉದ್ಧಾರವು ಅಸಾದ್ಯವಾದುದು ಈ ರೀತಿಯ ಪರಿಸ್ಥಿತಿಯಲ್ಲಿ ಈ ಮದುರವಾದ ಹರಿ ನಾಮದ ಕುರಿತಾಗಿಯೂ ಮಾನವರ ಉಪೇಕ್ಷೆಯು ಕೇವಲ ನಾಮಾಪರಾದಗಳ ಮೂಲಕವೇ ಪರಿಣ ಮಿಸುತ್ತವೆ ಈ ಕಾರಣವಾಗಿ ಶ್ರೀಕೃಷ್ಣಚೈತನ್ಯರು ತನ್ನ ಶಿಕ್ಷಾಷ್ಟಕದ ಮೂರನೆಯ ಶ್ಲೋಕದಲ್ಲಿ ನಾಮ ಸಾದಕನ ಯೋಗ್ಯತೆಯ ಬಗ್ಗೆ ಉಪದೇಶಿಸುವುದೇ ನೆಂದರೆ, -- ಸಾದಕರು ಸಮಸ್ತ ಸದ್ಗುಣಶಾಲಿಗ ಳಾಗಿದ್ದು ಹುಲ್ಲುಕಡ್ಡಿಗಿಂತಲೂ ಅಧಿಕವಾದ ದೈನ್ಯ ವನ್ನು ಹೊಂದಿರಬೇಕು, ಸ್ಥಿರವಾದ ವೃಕ್ಷದಂತೆ ಸಹ ನಶೀಲತೆಯಿಂದ ಅವರು ಕೂಡಿರಬೇಕು ಜಗ ತ್ತಿನ ಪ್ರತಿಯೊಬ್ಬ ಜೀವರಿಗೆ ಉಚಿತವಾದ ಸಮ್ಮಾ ನವನ್ನು ನೀಡಿ ಸಾದಕರಾದವರು ತಮ್ಮ ಸಮ್ಮಾನ ವನ್ನು ಯಾವ ಮಾತ್ರಕ್ಕಾಗಿಯೂ ಚಿಂತಿಸಬಾರದು ಈ ರೀತಿಯ ಸ್ವಭಾವದಿಂದ ಕೂಡಿ ಭಕ್ತರು ಶ್ರೀಹ ರಿನಾಮವನ್ನು ಉಚ್ಚರಿಸಿದಲ್ಲಿ ನಾಮದ ಮುಖ್ಯಫ ಲವಾದ ಕೃಷ್ಣಪ್ರೇಮವನ್ನೂ, ಪರಮಾನಂದವನ್ನೂ ಅವರು ಪಡೆಯುವರಲ್ಲದೆ ಗೌಣಫಲವಾಗಿ ಮುಕ್ತಿ, ಭುಕ್ತಿ ಇತ್ಯಾದಿಯಾಗಿ ಸರ್ವ ಶುಭವೂ ಅವರಿಗೆ ಕರತಲಗತವಾಗುತ್ತದೆ ಭಗವದ್ಭಕ್ತಿಯೇ ಸಮಸ್ತ ಸದ್ಗುಣಗಳಿಗೆ ಮೂಲವಾದುದು ಆದುದರಿಂದ ಪಾರಮಾರ್ಥಿಕ ಶ್ರೇಯಸ್ಸನ್ನು ಇಚ್ಛಿಸುವ ಮಾನ ವರು ದುಷ್ಟಸಂಗವನ್ನು ಪರಿಹರಿಸಿ ಸಜ್ಜನರ ಸಂಗ ವನ್ನು ಕೈಗೊಂಡು ಅನುಕ್ಷಣವಾಗಿ ಹರಿನಾಮ ಸಂಕೀ ರ್ತನೆಯನ್ನು ಅವಲಂಬಿಸಿದಲ್ಲಿ ಕ್ಷಣಭಂಗುರವಾದ ಈ ಮನುಷ್ಯ ಜನ್ಮದಲ್ಲಿಯೇ ಭಗವಂತನ ಚರಣಾ ರವಿಂದಗಳನ್ನು ಸೇರಿ ಶ್ರೀಕೃಷ್ಣನ ಪರಮಾನಂದಮ ಯವಾದ ನಿತ್ಯದಾಸ್ಯವನ್ನು ಪಡೆಯಬಹುದು ✪

# ರಮಣೀಯ ಕ್ಷೇತ್ರ ಕಾರಿಂಜ

----ಗಣಪತಿಭಟ್ ಅರ್ತಿಕಜೆ.

ಕೃತೇ ರೌದ್ರಗಿರಿರ್ನಾಮ
ತ್ರೇತಾಯಂ ಗಜರಾಡ್ಗಿರಿ
ದ್ವಾಪರೇ ಭೀಮ ಶೈಲಶ್ಚ
ಕಾರಿಂಜಸ್ತು ಕಲೌಯುಗೇ

ಎಂಬ ಶ್ಲೋಕಗಳು "ಸ್ಕಾಂದಪುರಾಣದಲ್ಲಿ" ಕಾರಿಂಜೆಯನ್ನು ವರ್ಣಿಸಿವೆ ಕೃತಯುಗದಲ್ಲಿ ರೌದ್ರಗಿರಿಯೆಂದೂ ತ್ರೇತಾಯುಗದಲ್ಲಿ ಗಜರಾಡ್ಗಿರಿಯೆಂದೂ, ದ್ವಾಪರಯುಗದಲ್ಲಿ ಭೀಮ ಶೈಲವೆಂದೂ, ಹೆಸರು ಪಡೆದಿದ್ದ ಕ್ಷೇತ್ರವು ಕಲಿಯುಗದಲ್ಲಿ "ಕಾರಿಂಜ" ಎನಿಸಿಕೊಂಡಿದೆ ಹಿಂದೆ ಇಲ್ಲಿಯ ಆರಾದನೆಯು ಶೈವರಿಂದಲೂ, ವೈಷ್ಣವರಿಂದಲೂ, ಮತ್ತು ಜೈನರಿಂದಲೂ ನಡೆಸಲ್ಪಡುತ್ತಿದ್ದು ದರ್ಮಸಹಿಷ್ಣುತೆಗೆ ಸಾಕಷ್ಟು ಆದ್ಯತೆ ಸಿಕ್ಕಿದೆ ದೆಟ್ಟದ ಮೇಲೆ ಶಿವಲಿಂಗವಿದ್ದು ಹತ್ತಿರವೇ ಶಾಸ್ತಾರ ಗುಡಿಯೂ ಇದೆ ದೇಗುಲದ ಸಮೀಪವೇ ಎರಡು ಕೆರೆಗಳಿದ್ದು ಅವುಗಳು "ಅಂಗುಷ್ಠತೀರ್ದ" ಮತ್ತು "ಜಾನುತೀರ್ದ" ಗಳೆಂಬ ಹೆಸರುಗಳಿಂದ ಪ್ರಸಿದ್ಧಿಯಾಗಿವೆ ಶಿವ ದೇವಾಲಯದ ಕೆಳಗೆ ಪಾರ್ವತಿಯ ದೇಗುಲವಿದ್ದು ಗಣಪತಿ, ಪಿಲಿಚಾಮುಂಡಿ ಹಾಗೂ ನಾಗಬನಗಳಿವೆ ಅಲ್ಲೆ ಕೆಳಗೆ ಗದಾತೀರ್ದವೆಂಬ ಸರೋವರ ವಿದ್ದು, ಜಾತ್ರೆ ಮೊದಲಾದ ಪವಿತ್ರದಿನಗಳಲ್ಲಿ ಅಸಂಖ್ಯ ಭಕ್ತಾದಿಗಳು ಇಲ್ಲಿ ಸ್ನಾನ ಮಾಡಿ ಪರಿಶುದ್ಧರಾಗುತ್ತಾರೆ ದೇಗುಲದ ಸನಿಹವೇ ರದಬೀದಿ ಹಾಗೂ ದರ್ಮಸತ್ರಗಳು ಇವೆ ಬೇರೆಲ್ಲಿಯೂ ಇಲ್ಲದಂತಹ ವಿಶಿಷ್ಟರೀತಿಯಲ್ಲಿ ಶಿವ ಮತ್ತು ಪಾರ್ವತಿಯರಿದ್ದು ಸಮಾನ ಶಕ್ತಿ ಸಾಮರ್ಥ್ಯಗಳಲ್ಲಿ ಶಿವ ಮತ್ತು ಪಾರ್ವತಿಯರ ಜಾತ್ರೆ ಉತ್ಸವಗಳು ಸಂದರ್ಭಾನುಗುಣವಾಗಿ ಒಟ್ಟಾಗಿಯೂ, ಬೇರೆ ಬೇರೆಯಾಗಿಯೂ ಜರುಗಿಸಲ್ಪಡುತ್ತವೆ ಇಲ್ಲಿ ತ್ರಿಕಾಲಗಳಲ್ಲಿಯೂ ಪೂಜೆಯುನಡೆಯುತ್ತದೆ

ಕಾರಿಂಜೇಶ್ವರನ ಸನ್ನಿದಿಯಲ್ಲಿ ನಿತ್ಯಪೂಜಾ ಕಾಲದಲ್ಲಿ ನಡೆಯುವ ವಾನರ ಸಮಾರಾದನೆ ಬೇರೆಲ್ಲೂ ಕಾಣದಂತಹ ಹರವಾನರ ಸಂಬಂದ ಅಪೂರ್ವ ಸಂಪ್ರದಾಯ ವಾಗಿದೆ ಕಾರಿಂಜೇಶ್ವರನಿಗೆ ದಿನ ನಿತ್ಯ ಅರ್ಪಿಸಲಾದ ಮೂರು ಸೇರು ಅಕ್ಕಿ ಅನ್ನದ ನೈವೇದ್ಯವನ್ನು ವಾನರರಿಗೆ ನಿರ್ಮಿಸಲಾದ ಕಲ್ಲಿನಕಟ್ಟೆಯ ಮೇಲೆ ಹಾಕಲಾಗುವುದು ಅದೇ ಸಮಯದಲ್ಲಿ ಸುತ್ತು ಮುತ್ತಲಿನ ಕಾಡುಗಳಿಂದ ಮಂಗಗಳು ಬಂದು ಈ ನೈವೇದ್ಯದ ಅನ್ನವನ್ನು ತಿಂದು ಮುಗಿಸುವುವು. ಮಂಗಗಳ ಉಪದ್ರವ ಕಡಿಮೆಯಾಗಲೆಂದು ಹರಕೆಹೊತ್ತು ಪ್ರಾರ್ದಿಸಿದ ಆಸ್ತಿಕ ಭಕ್ತರು ಬಾಳೆ ಹಣ್ಣು ಮೊದಲಾದುವನ್ನು ವಾನರರಿಗೆ ಅರ್ಪಿಸುವ ಕ್ರಮವೂ ಇದೆ

ಶ್ರೀ ಕ್ಷೇತ್ರ ಕಾರಿಂಜೆಯು ದಕ್ಷಿಣ ಕನ್ನಡದ ಬಂಟ್ವಾಳ ತಾಲೂಕಿನ ಕಾವಳ ಮೂಡೂರು ಗ್ರಾಮದಲ್ಲಿದೆ ಮಂಗಳೂರಿನಿಂದ ದರ್ಮಸ್ಥಳ ಮಾರ್ಗದಲ್ಲಿ ವಗ್ಗದಿಂದ ೨೪ ಕಿ.ಮೀ ದೂರದಲ್ಲಿರುವ ಈ ಬೆಟ್ಟ, ಭಕ್ತಾದಿಗಳನ್ನು ಕೈಮುಗಿದು ಕರೆಯುವಂತಿದೆ ಕಾರಿಂಜಕ್ಷೇತ್ರವು ಆಕಾರದಲ್ಲಿ ನೋಡುವಾಗ ವೃಷಭವು ಮೌನವಾಗಿ ಮಲಗಿದಂತೆಯೂ, ಮತ್ತೊಂದೆಡೆಯಿಂದ ನೋಡಿದರೆ ಆನೆಯೊಂದು ಬಂಡೆಗಲ್ಲಿನಂತೆ ನಿಂತಂತೆ ತೋರುವುದು ಸುತ್ತಲೂ ಕೊಡ್ಯಮಲೆಯೆಂಬ ಅರಣ್ಯ ಬೆಳೆದು ನಿಂತಿದ್ದು ಗಿರಿಯ ಮೇಲೆ ಶಿವಪಾರ್ವತಿಯರ ದೇಗುಲಗಳು ವಿರಾಜಿಸುವುದನ್ನು ಕಾಣಬಹುದು ಸಮುದ್ರಮಟ್ಟದಿಂದ ಸುಮಾರು ೫೦೦ ಮೀಟರು ಎತ್ತರವಿದ್ದ ಈ ಶಿವಾಲಯವು ಸಂಜೆ ಹೊತ್ತು ಸಂದರ್ಶಿಸಿ ನೋಡಲು ರಮಣೀಯವಾಗಿಯೂ, ಆನಂದದಾಯಕವಾಗಿಯೂ ಆಗಿದ್ದು ಭಕ್ತರನ್ನು ತನ್ನೆಡೆಗೆ ಆಕರ್ಷಿಸುವಂತಹ ಪುಣ್ಯಕ್ಷೇತ್ರವಾಗಿದೆ ಸಾವಿರಾರು ವರ್ಷಗಳ ಪ್ರಾಚೀನತೆಯನ್ನು ಹೊಂದಿದ ಕ್ಷೇತ್ರವು ಸಂಜೆಯ ಹೊತ್ತು ತನ್ನ ನಿಸರ್ಗ ಸೌಂದರ್ಯತೆಯನ್ನು ಮೆರೆದು ಭಕ್ತಾದಿಗಳ ಮನಸ್ಸನ್ನು ರಂಜಿಸುವಂತಹ ಪವಿತ್ರಕ್ಷೇತ್ರವಾಗಿದೆ



ತುಳುನಾಡ ಇತಿಹಾಸದಲ್ಲಿ ಇಲ್ಲಿನ ದೇವರ ಮೂರ್ತಿಗಳು ಸುಮಾರು ಹತ್ತನೆಯ ಶತಮಾನಕ್ಕಿಂತಲೂ ಪೂರ್ವದ್ದಾಗಿದೆ ಎಂದು ಇತಿಹಾಸ ಸಂಶೋದಕರು ಅಭಿಪ್ರಾಯ ಪಟ್ಟಿದ್ದಾರೆ

ಇಲ್ಲಿನ ದೇವಸ್ಥಾನಗಳಿಗೆ ವಿಜಯನಗರದ ದೊರೆ, ಶ್ರೀಕೃಷ್ಣದೇವರಾಯ, ಅಲೂಪದೊರೆ, ಕೃಷ್ಣಾನಂದ ಒಡೆಯರವರು ಉಂಬಳಿಯಾಗಿ ದಾನ ದತ್ತಿಗಳನ್ನು ನೀಡಿರುವ ಬಗ್ಗೆ ಉಲ್ಲೇಖಗಳಿವೆ ದೇವಾಲಯದ ಧ್ವಜಸ್ತಂಭದಲ್ಲಿ "ಸುರಪುರದ" ರಾಜಾ ವೆಂಕಟಪ್ಪ ನಾಯಕರ ಕೊಡುಗೆಯ ವಿಶ್ಲೇಷಣೆ ಇದೆ ಇತಿಹಾಸ, ಪುರಾಣ ಯುಗಗಳಲ್ಲಿ ಈ ದೇಗುಲ ತನ್ನ ಹಿರಿಮೆಯನ್ನು ಸಾರುತ್ತಾ ಬಂದಿದೆ

ಸೌರಮಾನ ಯುಗಾದಿಯಂದು ಹೊಸವರ್ಷ ಆರಂಭವಾಗಿ ಆ ದಿನ ಶಿವ, ಪಾರ್ವತಿಯರ ರದೋತ್ಸವ ಒಟ್ಟಿಗೆ ನಡೆಸಲ್ಪಡುತ್ತದೆ ವೃಷಭ ಮಾಸದಲ್ಲಿ ಬಲಿ ಉತ್ಸವಗಳು ಇರುತ್ತವೆ ತುಲಾಮಾಸದಲ್ಲಿ ರಾತ್ರೆ ಪೂಜಾದಿಗಳು ನಡೆದು ದೀಪಾವಳಿಗೆ ಬಲಿ ಉತ್ಸವ ನಡೆಯುತ್ತವೆ ಭೂತಕೋಲ ಇತ್ಯಾದಿಗಳು ಈ ಸಮಯದಲ್ಲಿ ಜರುಗುತ್ತವೆ -- ತ್ರಿಕಾಲದಲ್ಲಿಯೂ ಪೂಜೆ ಉತ್ಸವ ವೃಶ್ಚಿಕಮಾಸದಲ್ಲಿ ನಡೆದು ರಾತ್ರಿ ದೀಪೋತ್ಸವ ಜರುಗಿ ಪಾರ್ವತಿ, ಪರಮೇಶ್ವರರ ರದೋತ್ಸವ ಒಟ್ಟಾಗಿನಡೆಯುತ್ತದೆ

ಕುಂಭ ಮಾಸದಲ್ಲಿ ವರ್ಷಾವದಿ ಜಾತ್ರೆ ಆರಂಭವಾಗುತ್ತದೆ ಆಗ ಧ್ವಜಾರೋಹಣವಾಗಿ ೭ ದಿನಗಳ ಜಾತ್ರೆ ನಡೆಸಲ್ಪಡುತ್ತದೆ ನಾಲ್ಕುದಿನ ವಿಶೇಷ ಉತ್ಸವಗಳು ನಡೆಯುತ್ತವೆ ಆ ಸಂದರ್ಭದಲ್ಲಿ ೨ ದಿನಗಳ ಶಿವಪಾರ್ವತಿಯರ ಭೇಟಿ ಎಂಬ ವಿಶೇಷ ಉತ್ಸವವೂ ಒಂದು ದಿನದ ಶಯನ ಉತ್ಸವವೂ ಉಳಿದೊಂದುದಿನ ಮಹಾ ರದೋತ್ಸವವೂ ನಡೆಯುತ್ತದೆ ಪಾರ್ವತೀದೇವಿಯ ಅವಭೃತಸ್ನಾನದೊಂದಿಗೆ ಧ್ವಜಾವರೋಹಣವಾಗಿ ಜಾತ್ರೆ ಕೊನೆಗೊಳ್ಳುತ್ತದೆ 

# ನಾಗಪೂಜೆ

ನಮ್ಮ ಸಮಾಜದಲ್ಲಿ ಸರ್ಪಕ್ಕೆ ಧಾರ್ಮಿಕ ಮತ್ತು ಸಾಂಸ್ಕೃತಿಕವಾಗಿ ಹೆಚ್ಚು ಮಾನ್ಯತೆ ಸಿಕ್ಕಿದೆ ಪ್ರತಿ ವರ್ಷ ಇಡೀ ದೇಶದಲ್ಲಿ ಶ್ರಾವಣಶುಕ್ಲ ಪಂಚಮಿಯಂದು ನಾಗಪಂಚಮಿಯನ್ನು ಹಬ್ಬವಾಗಿ ಆಚರಿಸುತ್ತಾರೆ ಅಂದು ಮನೆಯ ಗೋಡೆಗಳ ಮೇಲೆ ಏಳು ಇಲ್ಲವೇ ಒಂಭತ್ತು ಹೆಡೆಗಳುಳ್ಳ ಹಾವಿನ ಆಕೃತಿಯನ್ನು ಬರೆಸುತ್ತಾರೆ ಹಾಗೆಯೇ ವಿಬಿನ್ನ ರೀತಿಯ ಧಾರ್ಮಿಕ ಪದ್ಧತಿಗಳೊಂದಿಗೆ ನಾಗಪೂಜೆಯ ಹಬ್ಬವನ್ನು ಆಚರಿಸುತ್ತಾರೆ ಅನೇಕ ಮಂದಿ ಹಾವಾಡಿಗರು, ಹಾವು ಗೊಲ್ಲರು 'ನಾಗದೇವತೆಗೆ ಹಾಲು ನೀಡಿ' ಎಂದು ಕೂಗುತ್ತಾ ಬೀದಿಗಳಲ್ಲಿ ಹೊರಡುತ್ತಾರೆ ಆಗ ಅನೇಕ ಶ್ರದ್ಧೆಯುಳ್ಳ ಗೃಹಿಣಿಯರು ಶುದ್ಧ ಹಾಲನ್ನು ನಾಗದೇವತೆಗೆಂದು ನೀಡುತ್ತಾರೆ ಆ ಹಾವುಗಳನ್ನು ಕುಂಕುಮದಿಂದ ಅರ್ಚಿಸಿ ಪೂಜಿಸುತ್ತಾರೆ ಹೀಗೆ ಹಿಂದೂ ಜನಸಮುದಾಯ ನಾಗದೇವತೆಯ ಬಗ್ಗೆ ಬಯ -- ಭಕ್ತಿಗಳಿಂದ ಪೂಜೆ ಸಲ್ಲಿಸಿ, ನಾಗರ ಪಂಚಮಿಯನ್ನು ಆಸಕ್ತಿಯಿಂದ ಆಚರಿಸುತ್ತಾರೆ

ಸರ್ಪ ಮತ್ತು ಸೂರ್ಯ ಸಭ್ಯತೆ, ನಾಗರಿಕತೆಯ ವಿಕಾಸದ ಆರಂಬದಿಂದಲೇ ಜಗತ್ತಿನ ಎಲ್ಲ ಭಾಗಗಳಲ್ಲಿಯೂ ಒಂದಲ್ಲ ಒಂದು ರೀತಿಯಲ್ಲಿ ಪೂಜಿಸಲ್ಪಡುತ್ತಿವೆ ಭಾರತದಲ್ಲಿ ಸಾಹಿತ್ಯ ಕಲೆ, ಧರ್ಮ ಮತ್ತು ಜಾನಪದ ಸಂಸ್ಕೃತಿಯ ಕ್ಷೇತ್ರದಲ್ಲಿ ನಾಗಪೂಜೆಗೆ ವೈದಿಕಕಾಲಕ್ಕೂ ಮೊದಲಿನಿಂದಲೂ ಅತ್ಯಂತ ಮಹತ್ವಪೂರ್ಣಸ್ಥಾನವಿದೆ ಭಾರತದಲ್ಲಿ ಈ ನಾಗಪೂಜೆಯ ಪರಂಪರೆ ಎಂದು ಆರಂಬವಾಯಿತು ಎನ್ನುವ ವಿಚಾರದಲ್ಲಿ ಯಾವುದೇ ಪ್ರಾಮಾಣಿಕ ಮತ್ತು ನಿಶ್ಚಿತ ದಾಖಲೆಗಳು ಸಿಗುವುದಿಲ್ಲ ಆದರೆ ಈ ಪದ್ಧತಿ ವೈದಿಕ ಕಾಲಕ್ಕೂ ಸ್ವಲ್ಪ ಮೊದಲಿನಿಂದ ಆರಂಭವಾಗಿರಬೇಕೆಂಬ ಅಬಿಪ್ರಾಯವಿದೆ

ಪ್ರಾಚೀನ ಬಾರತದಲ್ಲಿ ವಾಸಿಸುತ್ತಿದ್ದವರಲ್ಲಿ 'ನಾಗಜಾತಿ'ಯ ಜನರೂ ಇದ್ದರು ಇವರ ನಾಗರಿಕತೆ ಮತ್ತು ಸಂಸ್ಕೃತಿ ಅತ್ಯಂತ ವಿಕಾಸಪೂರ್ಣಸ್ಥಿತಿಯಲ್ಲಿತ್ತು ಸಿಂದುಕೊಳ್ಳದ ನಾಗರಿಕತೆಯಲ್ಲಿ ಸಿಕ್ಕಿದ ಅವಶೇಷಗಳಿಂದಲೂ ಆ ಕಾಲದಲ್ಲಿಯೂ ನಾಗಪೂಜೆಯ ಪರಂಪರೆ ಇತ್ತೆಂಬುದೂ ಪುಷ್ಟಿಯಾಗುತ್ತದೆ ಬೌದ್ಧ ಮತ್ತು ಜೈನ ಧರ್ಮಗಳಲ್ಲಿಯೂ ಸಹ ನಾಗಪೂಜೆಗೆ ಪವಿತ್ರವಾದ ಸ್ಥಾನಕೊಟ್ಟಿದ್ದಾರೆ ಮುಲಿಚಂದನೆಂಬ ನಾಗ ಹೆಡೆಯನ್ನು ಹರವಿ ಭಗವಾನ್ ಬುದ್ಧನ ಜೀವನ ರಕ್ಷಿಸಿತೆಂದು ಉಲ್ಲೇಖ ಬರುತ್ತದೆ ಜೈನ ತೀರ್ಥಂಕರ ಪಾರ್ಶ್ವನಾಥರ ತಪಸ್ಸಿನಕಾಲದಲ್ಲಿ ಸ್ವತ ನಾಗನೇ ತನ್ನ ಹೆಡೆಯನ್ನು ಬಿಚ್ಚಿ ಬಿಸಿಲು, ಗಾಳಿ ಮತ್ತು ಮಳೆಯಿಂದ ಅವರ ರಕ್ಷಣೆಯನ್ನು ಮಾಡಿದ್ದನೆಂದು ತಿಳಿಯುತ್ತದೆ ಪಾರ್ಶ್ವನಾಥರ ವಿಗ್ರಹದಲ್ಲಿ ಇಂದಿಗೂ ಸಹ ಸರ್ಪದ ಚಿಹ್ನ ಇರುವುದು ಕಾಣುತ್ತದೆ

ಇಂದ್ರನು ವೃತ್ರಾಸುರ (ಸರ್ಪ)ನನ್ನು ವದೆಮಾಡಿದ ವಿಷಯ ಋಗ್ವೇದದಲ್ಲಿ ಕಾಣಸಿಗುತ್ತದೆ ವೇದಗಳಲ್ಲಿ ಸರ್ಪಸ್ತುತಿಯ ವರ್ಣನೆಯನ್ನು ನೋಡಬಹುದು, ಬೂಮಿಯನ್ನು ಸದಾ ಸುತ್ತುವ ಆ ಸರ್ಪಗಳಿಗೆ ಗೌರವವಿದೆ ಇವು ಸ್ವರ್ಗವನ್ನು ಸ್ಪರ್ಶಿಸುತ್ತವೆ, ಆಕಾಶದ ಜ್ಯೋತಿಗಳಾಗಿವೆ ಮತ್ತು ನೀರಿನ ಅಲೆಗಳಲ್ಲಿಯೂ ಸಹ ಇವು ಇವೆ, ಇತ್ಯಾದಿ

ಮಹಾಭಾರತದಿಂದ ಹಿಡಿದು ಪುರಾಣಗಳವರೆಗೆ ಅನೇಕ ದಾರ್ಮಿಕ ಗ್ರಂದಗಳಲ್ಲಿ ನಾಗಗಳ ಸಂಬಂದದಲ್ಲಿ ವಿಶಿಷ್ಟರೀತಿಯ ಅಲೌಕಿಕ ಕದೆಗಳ ವರ್ಣನೆ ಸಿಗುತ್ತದೆ ಕೌಟಿಲ್ಯ ತನ್ನ ಅರ್ದಶಾಸ್ತ್ರದಲ್ಲಿ ಹೆಡೆಯಿಂದ ಕೂಡಿದ ನಾಗವಿಗ್ರಹಗಳನ್ನು ವರ್ಣಿಸಿದ್ದಾನೆ ಪೂರ್ವ ಮದ್ಯಯುಗ ಆರಂಭವಾಗುತ್ತಿದ್ದಂತೆಯೇ ನಾಗಗಳ ಆಕೃತಿಗಳು ದೇವಾಲಯಗಳ ಗೋಡೆಗಳ ಮೇಲೆ ಕೆತ್ತಲ್ಪಡತೊಡಗಿದವು. ಅಲ್ಲಲ್ಲಿ ಅರ್ದಮಾನವ ಮತ್ತು ಅರ್ದಸರ್ಪದ ಆಕೃತಿಗಳೂ ಸಹ ನಿರ್ಮಿತಗೊಂಡಿದ್ದು ಕಾಣುತ್ತದೆ

ಬಾರತೀಯ ಜಾನಪದ ಕದೆಗಳಲ್ಲಿ ಪಾತಾಳಲೋಕವನ್ನು ನಾಗಲೋಕವೆಂದೇ ಕರೆದಿದ್ದಾರೆ ಪಾತಾಳದಲ್ಲಿ ಇರುವ ನಾಗ (ಸರ್ಪ) ನಗರವನ್ನು 'ಬೋಗವತಿ' (ಬೋಗವೆಂದರೆ ಹೆಡೆಯೆಂದರ್ದ ಶ್ರೀಮನ್ನಾಗೇಂದ್ರ ಭೋಗಸ್ಫುರದರುಣ ಮಣಿದ್ಯೋತಿ ಸಂದ್ಯಾನಿಬದ್ಧ ಪ್ರೇಮಂ ) ಎಂಬ ಹೆಸರಿನಿಂದ ಕೂಗುತ್ತಾರೆ ದೇಶದ ಪ್ರಾಚೀನ ಸ್ಥಾಪತ್ಯಕಲೆಯ ಪ್ರಮಾಣ ಇಂದಿಗೂ ನಮಗೆ ಸಿಗುವುದು ಆಗಿನ ಕಾಲದ (ಯುಗದಲ್ಲಿನ) ಸರ್ಪಪೂಜೆಯ ಮಹತ್ವವನ್ನು ಚೆನ್ನಾಗಿ ಅವು ಚಿತ್ರಿಸಿವೆ ಕ್ರಿಸ್ತಪೂರ್ವದಲ್ಲಿ ನಿರ್ಮಾಣಗೊಂಡ ಪ್ರಸ್ತರದ ಒಂದು ವಿಶಾಲ ನಾಗವಿಗ್ರಹ ಇಂದಿಗೂ ನಮಗೆ ದಕ್ಷಿಣ ಭಾರತದ ಕನಾಡಾ ಜಿಲ್ಲೆಯಲ್ಲಿ ಸಿಗುತ್ತದೆ ಇದರ ವರ್ಣನೆಯನ್ನು ನಾಲ್ಕನೆಯ ಶತಮಾನದಲ್ಲಿ ಭಾರತಕ್ಕೆ ಬಂದ ಚೀನೀ ಯಾತ್ರಿಕರು ತಮ್ಮ ಯಾತ್ರೆಯ ಸ್ಮರಣೆಗಳಲ್ಲಿ ತಿಳಿಸಿರುವ ಅಜಂತಾದ ಗುಹೆಗಳಲ್ಲಿ ನಾಗಪೂಜೆಗೆ ಸಂಬಂಧಿಸಿದ ಅನೇಕ ವಿಗ್ರಹಗಳು ಕಾಣಸಿಗುತ್ತವೆ

ವೈದಿಕಯುಗದಲ್ಲಿಯೂ ಸಹ ನಾಗಪೂಜೆಯ ಪ್ರಸಿದ್ಧಿಯ ಬಗ್ಗೆ ಸ್ಪಷ್ಟ ಪ್ರಮಾಣಗಳು ಸಿಗುತ್ತವೆ 'ಧರ್ಮಪದ ಅಟ್ಠಕಥಾ'ದಲ್ಲಿ ಹೇಳಿರುವ ವಿಷಯ ಹೀಗಿದೆ 'ಬನಾರಸ್‌ನಲ್ಲಿ ಏಳು ತಲೆಯ (ಕೂದಯ) ಮರಗಳ ಗುಂಪಿನಲ್ಲಿ ಒಂದು ನಾಗ ಎರಕ ಪತ್ತಕ್ಕೆ ಬುದ್ಧ ಧರ್ಮೋಪದೇಶ ಕೊಟ್ಟಿದ್ದ ಪ್ರಾಚೀನ ಧಾರ್ಮಿಕ ಗ್ರಂಥ ತೈತ್ತಿರೀಯ ಸಂಹಿತೆಯಲ್ಲಿಯೂ ಸಹ ಸರ್ಪಪೂಜೆಯ ಪರಂಪರೆಯ ಉಲ್ಲೇಖ ಸಿಗುತ್ತದೆ ಭಾರತದಲ್ಲಿ ಇಂದಿಗೂ ಸಹ ಅನೇಕ ಸ್ಥಳಗಳಲ್ಲಿ ನಾಗದೇವತೆಯ ಮಂದಿರಗಳನ್ನು ಕಾಣುತ್ತೇವೆ ಅಲ್ಲಿ ನಿಯಮಿತ ರೂಪದಲ್ಲಿ ಇಂದಿಗೂ ಪೂಜೆ -- ಪುನಸ್ಕಾರಗಳು ನಡೆಯುತ್ತವೆ

ನಾಗಪೂಜೆ ಮತ್ತು ನಾಗಪಂಚಮಿಗಳ ವಿಷಯದಲ್ಲಿ ಜಾನಪದ ಕದಗಳು ಇರುವವರೆಗೆ, ಇವುಗಳ ಬಗೆಗಿನ ದಂತಕದೆಗಳೂ ಇದ್ದೇ ಇರುತ್ತವೆ ಮಹಾರಾಷ್ಟ್ರದಲ್ಲಿಯೂ ಅನೇಕ ಜಾನಪದ ಕದಗಳಿವೆ ಅಲ್ಲಿಯ ಒಂದು ಕದೆಯ ಪ್ರಕಾರ, ರೈತನೊಬ್ಬ ಹೊಲದಲ್ಲಿ ಉಳುತ್ತಿರುವಾಗ ನಾಗರ ಮರಿಗಳನ್ನು ಕೊಂದುಬಿಟ್ಟ ನಾಗಿನಿ ಸೇಡು ತೀರಿಸಿಕೊಳ್ಳಲು ಆ ರೈತನ ಇಡೀ ಕುಟುಂಬವನ್ನು ಕಚ್ಚಿಬಿಟ್ಟಿತು ಆ ರೈತನ ವಿವಾಹಿತ ಮಗಳನ್ನು ಹುಡುಕಿಕೊಂಡು ಬೇರೊಂದು ಹಳ್ಳಿಗೂ ಹೋಯಿತು ಅಲ್ಲಿ ರೈತನ ಮಗಳು ನಾಗಪೂಜೆಯನ್ನು ಮಾಡುತ್ತಿರುವುದನ್ನು ಕಂಡು ಶಾಂತವಾಯಿತು ಅಲ್ಲದೆ ಆ ಕುಟುಂಬದವರನ್ನೆಲ್ಲಾ ಬದುಕಿಸಲು ಅವರಿಗೆ ಅಮೃತ ಸೇಚನ ಮಾಡಿತು ಎಂದೆಲ್ಲಾ ಕದೆ ಇದೆ

ಬೇರೊಂದು ಕದೆಯ ಪ್ರಕಾರ - ಬ್ರಾಹ್ಮಣನೋರ್ವನ ಐವರು ಸೊಸೆಯಂದಿರಲ್ಲಿ ನಾಲ್ವರು ನಾಗ ಪಂಚಮಿ ಆಚರಿಸಲು ತಮ್ಮ-- ತಮ್ಮ ತವರು ಮನೆಗಳಿಗೆ ಹೋದರು ಐದನೆಯವಳಿಗೆ ತವರು ಮನೆ ಇಲ್ಲದ್ದರಿಂದ ಮಾವನ ಮನೆಯಲ್ಲಿಯೇ ನಾಗಪೂಜೆಯನ್ನು ಮಾಡಿದಳು ಇದರಿಂದ ಸಂತಸಗೊಂಡ ಶೇಷನಾಗ, ಅವಳಿಗೆ ಧನ, ವಸ್ತ್ರ, ಆಭರಣ ಮುಂತಾದುವುಗಳನ್ನು ಕೊಟ್ಟು ಸುಖವಾಗಿರಲು ಕರುಣಿಸಿದ.

ಈ ನಾಗಪೂಜೆಯ ಪರಂಪರೆ ಕೇವಲ ಹಿಂದುದರ್ಮಕ್ಕಾಗಲೀ, ಅಥವಾ ಭಾರತಕ್ಕಾಗಲೀ ಸೀಮಿತವಾಗಿಲ್ಲ ಸರ್ಪಪೂಜೆಯ ಪರಂಪರೆ ಪ್ರಾಚೀನಕಾಲದಿಂದಲೂ ವಿಶ್ವವ್ಯಾಪಿಯಾಗಿದೆ ಈಜಿಪ್ಟ್‌ನಲ್ಲಿ ಕ್ರಿ.ಪೂ ೨೦೦೦ದ ಚರಿತ್ರೆಯನ್ನು ನೋಡಿದರೆ, ಸರ್ಪಗಳಲ್ಲಿ ದೇವತ್ವದ ಪರಿಕಲ್ಪನೆ ಇದ್ದುದು ಸಾಕ್ಷಿ

---ಮೂರ್ತಿ ರಾಮನಾಥಪುರ.

# ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ ತಿ ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ

ಶಿಲಾವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು ಇದಕ್ಕಾಗಿ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾದಾಯ ಇಲಾಖಾಧಿಕಾರಿಗಳಿಂದ ಪ್ರಮಾಣಪತ್ರವನ್ನು ಕಳುಹಿಸಬೇಕು

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ಶಿಲಾ, ಪಂಚಲೋಹ, ವಿಗ್ರಹಗಳನ್ನೂ 50 ಶತಾಂಶ ರಿಯಾಯಿತಿ ದರಗಳಲ್ಲಿ ಒದಗಿಸಲಾಗುವುದು ಇದಕ್ಕಾಗಿಯೂ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು ಹಣಧ ಸಂದಾಯವಾದ ನಂತರವೇ ವಿಗ್ರಹಗಳ ತಯಾರಿಕೆಯ ಕೆಲಸವನ್ನು ಕೈಗೆತ್ತಿಕೊಳ್ಳಲಾಗುವುದು

ತಿರುಪತಿಯಿಂದ ವಿಗ್ರಹಗಳನ್ನು ಪಡೆದು ತಮ್ಮಸ್ಥಳಗಳಿಗೆ ಸಾಗಿಸುವ ಹೊಣೆ ಆಯಾ ಅಭ್ಯರ್ಥಿಗಳಿಗೇ ಸೇರಿದ್ದು

ಕಾಲದಿಂದ ಕಾಲಕ್ಕೆ ತಿ ತಿ ದೇ ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು

***ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ--***

***ಕಾರ್ಯನಿರ್ವಹಣಾಧಿಕಾರಿ, ತಿ ತಿ ದೇ , ತಿರುಪತಿ--517 501***

# ಹೊಸದಾಗಿ ಬಿಡುಗಡೆಯಾಗಿರುವ ಉತ್ಕೃಷ್ಟ ಗ್ರಂಥಗಳು

| | | |
|---|---|---|
| 1 ದೇವಾಲಯಮುಲು---ತತ್ತ್ವವೇತ್ತಲು | ತೆಲುಗು | ರೂ 7--20 |
| 2 ಭಾರತೀಯ ದೇವಾಲಯಮುಲು | " | ರೂ 5--00 |
| 3 ಅನ್ನಮಯ್ಯ ಅಂತರಂಗಮುಲೋ ಅಲಮೇಲುಮಂಗ | " | ರೂ 2--40 |
| 4 ಭಾರತಾವತರಣಂ | " | ರೂ 1--30 |
| 5 ಎ ಹ್ಯಾಂಡ್ ಬುಕ್ ಆಫ್ ಹಿಂದೂ ರಿಲಿಜನ್ | ಆಂಗ್ಲ | ರೂ 2--70 |
| 6 ಸ್ವಾಮಿ ಪಟ್ಟಿನತ್ತಾರ್ | ತಮಿಳು | ರೂ 1--00 |
| 7 ಸಂತ ತ್ಯಾಗರಾಜ | ಹಿಂದಿ | ರೂ 5--30 |
| 8 ಗುರುಜಗನ್ನಾಥದಾಸರ ಕೃತಿಗಳು | ಕನ್ನಡ | ರೂ 8--40 |

ಅಂಚೆ ವೆಚ್ಚ ಪ್ರತ್ಯೇಕ, ಎಂ ಓ ಹಣವನ್ನು (ಪುಸ್ತಕದ ಬೆಲೆ ಹಾಗೂ ಅಂಚೆ ವೆಚ್ಚ ಕನಿಷ್ಠ ರೂ 6--00) ಸೇಲ್ಸ್‌ವಿಂಗ್ ತಿ ತಿ ದೇ ತಿರುಪತಿ ಇವರಿಗೆ ಕಳುಹಿಸಿ

**ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್, ತಿ ತಿ ದೇ., ತಿರುಪತಿ.**

ಯಾಗಿದೆ ಆ ಯುಗಕ್ಕೆ ಜನ ತಮ್ಮ ಮನೆಗಳಲ್ಲಿ ಹಾವುಗಳನ್ನು ಸಾಕುತ್ತಿದ್ದರಲ್ಲದೆ, ಅವುಗಳನ್ನು ಪೂಜಿಸುತ್ತಲೂ ಇದ್ದರು ಮಂಡಳಿ, ಸಮಾಜ--ಸರ್ಪದ ಮರಣಾನಂತರ ಅವುಗಳ 'ಮಮಿ'ಯನ್ನು (ಶವಾಗಾರ) ಕಟ್ಟಿ ಸಂಸ್ಕಾರವನ್ನು ಮಾಡುತ್ತಿತ್ತು ಈಜಿಪ್ಟ್‌ನಲ್ಲಿ 'ಈಜೋ' ಎಂಬ ಹೆಸರಿನ ಸರ್ಪವನ್ನು ಜ್ಞಾನದೇವತೆ ಎಂದು ತಿಳಿದಿದ್ದರು ಮೆಸಪಟೋಮಿಯಾ ಮತ್ತು ಗ್ರೀಕ್‌ಗಳಲ್ಲಿಯೂ ನಾಗಪೂಜೆಯ ರೂಢಿ ಇತ್ತು ಗ್ರೀಕ್‌ನಲ್ಲಿ ಹಾವನ್ನು ಶಕ್ತಿಯ ಸಂಕೇತವಾಗಿ ಮತ್ತು ಜ್ಞಾನದ ಕುರುಹು ಎಂದು ತಿಳಿದು ಪೂಜಿಸುತ್ತಿದ್ದರು ಮೊದಲಿನಿಂದಲೂ ಜಪಾನೀಯರು ಸರ್ಪವನ್ನು -- ಮಳೆಯ ದೇವತೆ ಎಂದು ತಿಳಿದು ಪೂಜಿಸುತ್ತಿದ್ದರು ಅಲ್ಲಿ ಬಿಳಿಯ ಸರ್ಪವನ್ನು ದೇವದೂತನೆಂತಲೂ, ಜಲಚರ ಸರ್ಪವನ್ನು ಜಲದೇವತೆಯೆಂತಲೂ ಭಾವಿಸುತ್ತಿದ್ದರು ನಾಗದರ್ಶನವನ್ನು ಶುಭಸಂದೇಶವೆಂದೇ ತಿಳಿದಿದ್ದರು ಚೀನಾದಲ್ಲಿ ಸರ್ಪವನ್ನು ಕೃಷಿದೇವತೆ ಎಂದು ತಿಳಿಯುತ್ತಿದ್ದರು ಅಲ್ಲಿ ಸರ್ಪದ ರಕ್ತವನ್ನು ಪವಿತ್ರವೆಂದು ತಿಳಿದು ತಮ್ಮ ಹಣೆಗಳಿಗೆ ಹಚ್ಚಿಕೊಳ್ಳುವ ಪದ್ಧತಿ ಇತ್ತು ಚೀನಾದ ರಾಜದಾನಿ ಬೀಜಿಂಗ್‌ನಲ್ಲಿ ಇಂದಿಗೂ ಒಂದು ಬೃಹದಾಕಾರದ ನಾಗದೇವಾಲಯವಿದೆ

ರೋಮನ್ ಸಂಸ್ಕೃತಿಯಲ್ಲಿ ಸರ್ಪಗಳಿಗೆ ಅತ್ಯಂತ ಪೂಜ್ಯವಾದ ಸ್ಥಾನವಿದೆ ಅಲ್ಲಿಯ ಜನ ಬಗವಾನ್ ಜ್ಯೂಸನ ಪೂಜೆಯನ್ನು ಸರ್ಪದೇವತೆಯ ರೂಪದಲ್ಲಿಯೇ ಮಾಡುತ್ತಿದ್ದರು ರೋಮ್‌ನ ದಕ್ಷಿಣಕ್ಕಿರುವ ಹೀರಾದೇವಾಲಯದಲ್ಲಿ ಈಗಲೂ ಸಹ ಪ್ರತಿವರ್ಷ ಒಂದು ಭವ್ಯ ಸಮಾರಂಬ ಏರ್ಪಡಿಸಿ ನಾಗಪೂಜೆಯನ್ನು ಮಾಡುತ್ತಾರೆ ಈ ಸಮಯದಲ್ಲಿ ಅವಿವಾಹಿತ ಯುವತಿಯರು ಹಾವುಗಳಿಗೆ ಜೋಳದಿಂದ ಮಾಡಿದ ಕೇಕನ್ನು ತಿನ್ನಿಸುತ್ತಾರೆ ಕೇಕನ್ನು ಹಾವು ತಿಂದರೆ ಅದು ಅವರಿಗೊಂದು ಶುಭದ ಸಂಕೇತ

ಫೊನೀಷಿಯಾ ಮತ್ತು ಬ್ಯಾಬಿಲೋನಿಯಾದ ಪ್ರಾಚೀನ ನಾಗರೀಕತೆಗಳಲ್ಲಿಯೂ ಸಹ ಸರ್ಪಪೂಜೆಗೆ ಪ್ರಮಾಣ ಸಿಗುತ್ತದೆ ಕ್ರಿ ಶ ದ ಆರಂಭಕ್ಕೇ ಸಿರಿಯಾ ಮತ್ತು ಏಷಿಯಾದ ಉಳಿದ ಭಾಗಗಳಲ್ಲಿಯೂ ಕೂಡ ಸರ್ಪ ಉಪಾಸನೆಯ ಪದ್ಧತಿ ಇತ್ತು ಟಿಬೆಟ್‌ನಲ್ಲಿ ಉಪದೇವತೆಯ ರೂಪದಲ್ಲಿ ನಾಗಪೂಜೆಯ ಪರಂಪರೆ ಇದೆ

ನಮ್ಮ ಪಕ್ಕದ ರಾಷ್ಟ್ರವಾದ ನೇಪಾಳದಲ್ಲಿ ನಾಗನನ್ನು ಮಳೆ ಮತ್ತು ಸಮೃದ್ಧಿಯ ದೇವತೆ ಎಂದು ತಿಳಿದಿದ್ದಾರೆ ಇಲ್ಲಿಯೂ ನಾಗಪಂಚಮಿಯ ಹಬ್ಬ ಬಹಳ ಉತ್ಸಾಹದಿಂದ, ವೈಭವೋಪೇತವಾಗಿ ಆಚರಿಸಲ್ಪಡುತ್ತದೆ



# ಉತ್ತರನ ಪೌರುಷ

---ಎ. ಎಸ್. ಪಂಕಜ,

ಕುಮಾರವ್ಯಾಸನ ಉತ್ತರ ಕುಮಾರನ ಪಾತ್ರವು ಸಾಹಿತ್ಯ ಲೋಕದ ಅದ್ವಿತೀಯ ಪಾತ್ರವಾಗಿ, ಚಿರಸ್ಮರಣೀಯ ಪಾತ್ರವಾಗಿ ಶೋಭಿಸುತ್ತದೆ ಯಾಕೆಂದರೆ ವಚನಗಾರುಡಿಗ ನಾರಣಪ್ಪ ಉತ್ತರನ ಮೂಲಕ ಹಾಸ್ಯರಸದ ಹೊನಲನ್ನು ಹರಿಸಿದ್ದಾನೆ

ಉತ್ತರನು ಮತ್ಸ್ಯದೇಶದರಾಜ ವಿರಾಟನ ಮಗ ಈತನ ಹೆಸರು ಇಂದಿಗೂ ಮನೆ ಮನೆಗಳಲ್ಲಿ ಪ್ರಸಿದ್ಧವಾಗಿದೆ ಶೌರ್ಯದ ಬಡಾಯಿಯನ್ನು ಮೂದಲಿಸುವಾಗ ಉತ್ತರನನ್ನು ಉದಾಹರಣೆಯಾಗಿ ಹೇಳುತ್ತಾರೆ -- "ಉತ್ತರನ ಪೌರುಷ ಒಲೆಯ ಮುಂದೆ ನನ್ನ ಗಂಡನ ಪೌರುಷ ಎಲೆಯ ಮುಂದೆ" ಎಂಬ ಗಾದೆ ಅತ್ಯಂತ ಪ್ರಸಿದ್ಧಿಯಾಗಿದೆ

ಕೌರವನು ವಿರಾಟನ ಗೋವುಗಳನ್ನು ಸೆರೆಹಿಡಿದು ಸೆಣಸಿದ ಗೋಪರನ್ನು ಸದೆಬಡಿದು ಅಳಿದುಳಿದ ಗೋಪರಲ್ಲಿ ಒಬ್ಬನಿಗೆ ಮೂಗಿನ ಮೇಲೆ ಸುಣ್ಣವನ್ನು ಬಳಿದು ಬಿಡುತ್ತಾನೆ ಅಲ್ಲಿ ವಿರಾಟನು ಊರಿನ ಕಾವಲಿಗಾಗಿ ಬಿಟ್ಟು ಹೋಗಿದ್ದ ಉತ್ತರಕುಮಾರನು ಮೇಳದ ಗಣಿಕೆಯರ ಮಧ್ಯದಲ್ಲಿ ಮೆರೆಯುತ್ತಿರುವುದನ್ನು ನೋಡಿ ಆತನ ಕಾಲಿಗೆರಗಿ ಶತ್ರುವಿನ ಉಪದ್ರವವನ್ನು ದೂರುತ್ತಾನೆ ಹಾಗೂ ಕೌರವ ಸೇನೆಯ ಸಂಪೂರ್ಣ ಚಿತ್ರವನ್ನು ಉತ್ತರ ಕುಮಾರನ ಮುಂದಿಟ್ಟು---

ಒಳಗೆ ನೀ ಕಾದುವಡೆ ದುರ್ಗವ
ಬದಲಿಸು, ಹರಿಬಕ್ಕೆ ಹಿಂದುಗಳೆಯದೆ
ಮಲೆವ ಮನನಿನಗೀಗಳಾದರೆ
ನಡೆಯಿ ಕಾಳಗಕೆ

ಎಂದು ಎಚ್ಚರಿಸುತ್ತಾನೆ ಆಗ ಉತ್ತರ ಕುಮಾರ ವಚನ ವೀರನಾಗಿ ಶಬ್ದ ಶೂರನಾಗಿ ಹಾಗೂ ಮಾತಿನ ಮಲ್ಲನಾಗಿ ಕಂಗೊಳಿಸುತ್ತಾನೆ ಯಾರೊಬ್ಬರನ್ನು ಲೆಕ್ಕಿಸದೆ ಮಾತನಾಡುವ ಅವನ ವೈಖರಿಯೇ ಅವನ ಪಾತ್ರದ ವೈಶಿಷ್ಟ್ಯವಾಗಿ ವಿಜೃಂಭಿಸುತ್ತದೆ ಆದರೆ ಅವೆಲ್ಲವೂ ಹೆಂಗಳೆಯರೆದುರಿನ ಮಾತು ಎಂದಾಗ ಆತನ ಪಾತ್ರ ಮತ್ತೊಂದು ವೈಶಿಷ್ಟ್ಯವನ್ನು ಪಡೆದುಕೊಳ್ಳುತ್ತದೆ ಉತ್ತರನು ತಾನು ಬಲಿಯೆಂದು ಬಗೆದು ಬೆರಳಿನಿಂದ ಮೀಸೆಯನ್ನು ತಿರುಗಿಸುತ್ತಾ ಕೆಲಬಲದ ಇಂದುಮುಖಿಯರನ್ನು ನೋಡಿ ತನ್ನ ಪರಾಕ್ರಮದ ಪರಿಣತೆಯನ್ನು ನುಡಿಯುತ್ತಾನೆ --

ಹಿಡಿದು ರಾಜ್ಯವ ಕೊಂಡು ಹೆಂಗುಸ
ಬಡಿದು ಪಾಂಡವ ರಾಯರನು ಹೊರ
ವಡಿಸಿ ಕೊಬ್ಬಿದ ಭುಜಬಲವನೆನ್ನೊಡನೆ
ತೋರಿದನೆ
ಬಡ ಯುದಿಷ್ಠಿರನೆಂದು ಬಗೆದನೆ
ಕಡುಗಿದರೆ ಕೌರವನ ಕೀರ್ತಿಯ
ತೊಡೆವೆನರಿಯನಲಾ ಎನುತ ಸುಕುಮಾರ
ಖತಿಗೊಂಡ

ಕವಿ ಇಲ್ಲಿ, ಉತ್ತರನನ್ನು ಸುಕುಮಾರನೆಂದು ಕರೆದಿದ್ದಾನೆ ಇದು ಅರ್ದಗರ್ಭಿತವಾಗಿದೆ ಕೌರವ ಯಮನ ಮನೆಯನ್ನು ಬಯಸಿದ ಕಾರಣ ತನ್ನ ವೈರವನ್ನು ಬಯಸಿದ್ದಾನೆ ಈ ಭೂಮಿಯ ಋಣ ಅವನಿಗೆ ತೀರಿತೆಂದು ಕಾಣುತ್ತದೆ ಎಂದು ನುಡಿದು ದುರ್ಯೋದನ ಮಾಡಿರುವ ಮೂರ್ಖತನದ ಬಗ್ಗೆ ಹೇಳುತ್ತಾನೆ---

ಜವನ ಮೀಸೆಯ ಮುರಿದನೋ ಭೈ
ರವನ ದಾಡೆಯ ನಲುಗಿದನೋ ಮೃ
ತ್ಯುವಿನ ಮೇಲುದ ಸೆಳೆದನೋ ಕೇಸರಿಯ
ಕೆಣಕಿದನೋ

ಎಂದೆನ್ನುತ್ತ 'ಬವರದಲ್ಲಿ ತೊಡಗಿ ಕೌರವ ಕುರುಡಾದ' ಎಂದು ಮರುಗುತ್ತಾನೆ ಅಷ್ಟೇ ಅಲ್ಲ, ತಾನು ಯಾರೊಡನೆ ಯುದ್ಧ ಮಾಡುವುದೆಂಬ ಸಮಸ್ಯೆಯೂ ಅವನನ್ನು ಕಾಡುತ್ತದೆ ನಂತರ ಹೇಳುತ್ತಾನೆ -- "ಆರೊಡನೆ ಕಾದಲಿ ಕೆಲವರು ಹಾರುವರು ಕೆಲರು ಅಧಮಕುಲದಲಿ ಸಂದು ಬಂದವರು ಕೆಲವರು ಅಂತಕನ ನೆರೆಯೂರವರು ಇನ್ನಾರು ಉಳಿದಿದ್ದಾರೆ? ಪೊಡವಿ ಪತಿಗಳು ಬಂದು ತುರುಗಳನ್ನು ಸೆರೆ ಹಿಡಿಯುವುದೇ? ಲೋಕದಲ್ಲಿ ಇದಕಿಂತ ಮತ್ತಾವ ಅಧರ್ಮ ಕಾರ್ಯವಿದೆ ತಾನೇನು ಗೋದನವನ್ನು ಬಿಡುವವನೇ? ಕೌರವ ಸೇನೆಯನ್ನು ಧೂಳೀಪಟ ಮಾಡುತ್ತೇನೆ" 'ಅರಿಯನೇ ಗಾಂಗೇಯನನು ತಾನರಿಯದವನೆ ದ್ರೋಣ, ಕುಲದಲಿ ಕೊರತೆ ಯೆನಿಸುವ ಕರ್ಣನೆಂಬವನೆನಗೆ ಸಮಬಲನೇ' ಎಂದು ಮೊದಲಾಗಿ ಸತಿಯರ ಮೊಗ ನೋಡುತ್ತ ಆಡುವ ವೀರನುಡಿಗಳನ್ನು ಕುಮಾರವ್ಯಾಸನು ಅತ್ಯದ್ಭುತವಾಗಿ ಚಿತ್ರಿಸಿದ್ದಾನೆ

ಈ ವಚನವೀರ ಉತ್ತರಕುಮಾರನಿಗೆ ಸಮಸ್ಯೆಗಳ ಮೇಲೆ ಸಮಸ್ಯಗಳು ಏಕೆಂದರೆ ಇವನ ಸಾರಥಿ ಯುದ್ಧದಲ್ಲಿ ಮಡಿದಿದ್ದಾನೆ ಶಿವನು ಇವನಿಗೊಬ್ಬ ಸಾರಥಿಕೊಟ್ಟರೆ ತನ್ನ ಕೈಗುಣವನ್ನು ತೋರಿಸುವುದಾಗಿ ಹೇಳುತ್ತಾನೆ ಆಗ ಒಳಿಯಲ್ಲಿಯೇ ಇದ್ದ ಪಾರ್ಥ ಉತ್ತರಕುಮಾರನ ಬಾಲಭಾಷೆಯನ್ನು ಕೇಳಿ ಪಾಂಚಾಲಿಯೊಂದಿಗೆ ತನ್ನನ್ನು ಉತ್ತರ ಕುಮಾರನಿಗೆ ಸಾರಥಿಯಾಗುವಂತೆ ಸೂಚಿಸು ಎಂದು ಹೇಳಿಕಳುಹಿಸುತ್ತಾನೆ ಸೈರಂಧ್ರಿಯ ಹೇಳಿಕೆಯಂತೆ ಬೃಹನ್ನಳೆಯನ್ನು ತನಗೆ ಸಾರದಿಯಾಗಲು ಉತ್ತರನು ತಿಳಿಸುತ್ತಾನೆ ಆಗ ಬೃಹನ್ನಳೆಯು ತಾನು ಹಿಂದೆ ಸಾರಥಿತ್ವವನ್ನು ಮಾಡಿದ್ದುಂಟು, ಆದರೆ ಈಗ ಮರೆತಿದ್ದೇನೆ ಅರಿಭಟರು ಭೀಷ್ಮಾದಿಗಳು ನಿಲಲರಿದು ಸಾರದಿತನ ಕೈಮನ ಬರಡರಿಗೆ ದೊರಕೊಂಬುದೇ? ರಣಸೂರೆಯಲ್ಲ! ಎಂದು ಹೇಳಲು ಮತ್ತೆ ಉತ್ತರನು "ಆನಿರಲು ಭೀಷ್ಮಾದಿಗಳು ನಿನಗೇನು ಮಾಡಬಲ್ಲರು? ಅಳುಕದೆ ನೀನು ನಿಲ್ಲು ಸಾಕೊಂದು ನಿಮಿಷಕೆ ಅನಿಬರನು ಗೆಲುವೆ ತಾನಾರೆಂದರೆಯಲಾ, ಗುರುಸೂನುಕರ್ಣದ್ರೋಣರೆಂಬವರಾನರಿಯದವರಲ್ಲ? ಎಂದು ವೀರರ ಬಗ್ಗೆ ತಾನು ಅವರನ್ನು ನೋಡಿಲ್ಲದಿದ್ದರೂ ಅವರೆಲ್ಲರಿಗಿಂತ ಸಮರ್ದನೆಂದು ಬಡಾಯಿಕೊಚ್ಚುತ್ತಾನೆ

ಅರ್ಜುನನು ಅತಿವೇಗದಿಂದ ರದವನ್ನು ಯುದ್ಧರಂಗದೆಡೆಗೆ ಸಾಗಿಸುತ್ತಾನೆ ಕುಮಾರವ್ಯಾಸ ಮೇಲಿನ ಈ ಭಾಗದಲ್ಲಿ ಉತ್ತರ ಕುಮಾರನ ಒಂದು ಮುಖದ ಪರಿಚಯವನ್ನು ಅತ್ಯಂತ ಸ್ವಾರಸ್ಯವಾಗಿ ಮಾಡಿ ಕೊಟ್ಟಂತೆಯೇ ಮುಂದಿನ ಭಾಗದಲ್ಲಿ ಆತನ ಮತ್ತೊಂದು ಮುಖವನ್ನೂ ಅಷ್ಟೇ ಅದ್ಭುತವಾಗಿ ಪರಿಚಯಿಸಿಕೊಡುತ್ತಾನೆ ಯುದ್ಧರಂಗವನ್ನು ಪ್ರವೇಶಿಸುತ್ತಿದ್ದಂತೆಯೇ ಅವನ ವಾಚಾಳಿತನ ಮಾಯವಾಗುತ್ತದೆ. ಉತ್ತರನ ಪೌರುಷ ಕೇವಲ ಹೆಂಗಳೆಯರ ಮುಂದೆ ಎಂಬುದು ಸ್ಥಾಪಿತವಾಗುತ್ತದೆ ಸಾಗರದಂತಿದ್ದ ಕೌರವನ ಸೇನೆಯನ್ನು ಕಂಡು ಅವನ ಕಣ್ಣು ಮಂಜು ಕವಿಯುತ್ತದೆ ಗಂಟಲು ಒಣಗುತ್ತದೆ ತುಟಿ ಅದುರುತ್ತದೆ ಕೈಯಿಂದ ಮುಖ ಮುಚ್ಚಿಕೊಳ್ಳುತ್ತಾನೆ ಸಾರಥಿಯನ್ನು ಕುರಿತು

- ಎಲೈ ಸಾರದಿ ರದವ ಮುಂದಕ್ಕೆ ನೂಕಿ ಗಂಟಲಕೊಯ್ಸೆ, ಸುಡುಸುಡು ಕಾಕಲಾ ಕಣ್ಣೊಡದವೇ ಕಾಣಾ ಮಹಾ ಬಲವ, ನಾಕನಿಳಯರಿಗರಿದು ನಿನಗೆ ವಿವೇಕವೆಳ್ಳನಿತಿಲ್ಲವಾ ತೆಗೆ ಸಾಕು ವಾಪೆಯ ಮರಳಿ ಸೆಳೆ ತೇಜಿಗಳ ತಿರುಹು? -- ಎಂದು ಆಜ್ಞೆ ಮಾಡುತ್ತಾನೆ ಆತನ ಮಾತು ಕೇಳಿಸದವನಂತೆ ಪಾರ್ದ ರದವನ್ನು ಮುಂದೆ ಬಿಡಲು ಭಯದಿಂದ ಉತ್ತರನ ಕೈಲಿದ್ದ ಬಿಲ್ಲು ಬಾಣಗಳು ಕೆಳಗೆ ಬೀಳುತ್ತವೆ ತನ್ನ ಮಾತನ್ನು ಲೆಕ್ಕಿಸದ ಸಾರದಿಯನ್ನು 'ಸ್ವಾಮಿ ದ್ರೋಹಿ' ಎಂದು ನಿಂದಿಸುತ್ತಾನೆ ಪಾರ್ದ ಆ ಮಾತಿಗೆ ನಗುತ್ತ ರದವನ್ನು ಮತ್ತೆ ಮುನ್ನಡೆಸುತ್ತಾನೆ "ಈತ ಎನ್ನನು ಕೊಂದ" ನೆಂದೇ ಭಾವಿಸಿದ ಉತ್ತರ ರದದಿಂದ ಕೆಳಕ್ಕೆ ದುಮುಕಿ ಕೆದರಿದ ಕೇಶದಿಂದ ಹಿಂತಿರುಗಿ ನೋಡದೆ ಓಡುತ್ತಾನೆ ಇದನ್ನು ಕಂಡ ಅರ್ಜುನನು ದೆಂಬತ್ತಿಹೋಗಿ 'ಉತ್ತರ' ನಿಲ್ಲು ನಿಲ್ಲು ಮುಂದೆ ಹೋದೆಯಾದರೆ ನಿನ್ನ ಶಿರವನ್ನು ಕಿತ್ತು ಬಿಸುಡುತ್ತೇನೆ' ಎಂದು ಹೇಳಿದುದನ್ನು ಕೇಳಿದ ಉತ್ತರನು 'ಮೃತ್ಯುವೋ ಸಾರದಿಯೊ ಪಾಪಿಯ ನೆತ್ತಣಿಂದವೆ ಮಾಡಿಕೊಂಡೆ' ಎಂದು ಹೇಳುತ್ತ ನಿಲ್ಲದೆ ಮುಂದೋಡುತ್ತಾನೆ ಅರ್ಜುನನು ಕೂಡಲೆ ಬೆನ್ನಟ್ಟಿ ಹೋಗಿ ನೂರು ಹೆಜ್ಜೆಯಲ್ಲಿ ಆತನನ್ನು ಹಿಡಿದು ನಿಲ್ಲಿಸುತ್ತಾನೆ

ಬಳಿಕ "ಉತ್ತರ ಇದೇನು ಮಾಡಿದೆ ನೀನು? ವೀರರಾದವರು ಜೀವಗಳ್ಳರ ಪದವ ಹಿಡಿಯುತ್ತಾರೆಯೆ? ನಪುಂಸಕನಾದ ನಾನೇ ಹೋರಾಟಕ್ಕಿಳಿದಿದ್ದೇನೆ ವೀರನಾದ ನೀನು ಅಂಜುವುದೆ? ಎನಲು ಉತ್ತರ ಕುಮಾರ ಭಂಡವಾಗಿ ಉತ್ತರಿಸುತ್ತಾನೆ---

"ನೀವು ವೀರರು ನೆರೆ ನಪುಂಸಕ
ರಾವು ಸಾವವರಲ್ಲ ಲೋಕದ
ಜೀವಗಳ್ಳರಿಗಾವು ಗುರುಗಳು
ಬಿಟ್ಟು ಕಳುಹೆಂದ"

ಉತ್ತರನು ತನ್ನನ್ನು ಬಿಟ್ಟು ಬಿಡುವಂತೆ ಅಂಗಲಾಚುತ್ತಾನೆ ಲಲನೆಯರ ಮದ್ಯೆಯ ಉತ್ತರನ ಮಾತುಗಳಿಗೂ, ರಣರಂಗದಲ್ಲಿಯ ಕಲಿಗಳ ಮದ್ಯೆಯ ಉತ್ತರನ ಮಾತುಗಳಿಗೂ ಭೂಮ್ಯಾಕಾಶದಷ್ಟು ಅಂತರವಾಗಿದೆ ಬಡಾಯಿ ಕೊಚ್ಚುವಂತೆಯೇ ಬಂಡು ಬಿದ್ದು ಜೀವವುಳಿಸಿಕೊಳ್ಳುವ ಕಲೆಯೂ ಅವನಿಗೆ ವರವಾಗಿ ಬಂದಂತೆ ತೋರುತ್ತದೆ ಕೊನೆಗೆ ಅರ್ಜುನನು 'ನಾನೇ ಯುದ್ಧ ಮಾಡುತ್ತೇನೆ, ನೀನು ಸಾರಥಿಯಾಗು ನಡೆ' ಎಂದು ಎಳೆದು ತಂದು ಆತನನ್ನು ರಥದಲ್ಲಿ ಕೂರಿಸುತ್ತಾನೆ, ಧೈರ್ಯ ತುಂಬಿ ಆತನನ್ನು ಕಲಿಯನ್ನಾಗಿ ಮಾಡುತ್ತಾನೆ ಸಮೀಪದಲ್ಲಿಯೇ ಇದ್ದ ಶಮೀವೃಕ್ಷದ ಬಳಿ ಆತನನ್ನು ಕರೆದುಕೊಂಡು ಹೋಗಿ, ಅಜ್ಞಾತವಾಸಕ್ಕೆ ಹೋಗುವ ಮುನ್ನ ಆ ಮರದಲ್ಲಿ ಹೆಣದಾಕಾರದಲ್ಲಿ ಕಟ್ಟಿದ್ದ ಆಯುದಗಳನ್ನು ಅವನಿಂದ ತೆಗೆಸುತ್ತಾನೆ ಆ ನಂತರ ಉತ್ತರನಿಗೆ ಅರ್ಜುನನ ಬಗ್ಗೆ ಸಂಶಯ ಮೂಡಿ ವಿವರವನ್ನು ತಿಳಿಯಲು ಅಪೇಕ್ಷಿಸುತ್ತಾನೆ ಆಗ ಅರ್ಜುನ ಎಲ್ಲವನ್ನು ವಿವರವಾಗಿ ತಿಳಿಸುತ್ತಾನೆ ತನ್ನ ದಶನಾಮಗಳನ್ನು ಅವನಿಗೆ ತಿಳಿಸುತ್ತಾನೆ ತನ್ನ ಈ ವೇಷದಾರಣೆಗೆ ಇದ್ದ ಕಾರಣವನ್ನು ತಿಳಿಸಿ, ನಿಜರೂಪವನ್ನು ದರಿಸುತ್ತಾನೆ ಯುದ್ಧ ವೀರನಾಗಿ ನಿಂತು ರದವೇರಿ, ಉತ್ತರನನ್ನು ರದ ಚಲಿಸಲು ಹೇಳುತ್ತಾನೆ ಯುದ್ಧ ರಂಗಕ್ಕೆ ಬಂದು ನಿಂತಮೇಲೆ ಉತ್ತರನ ಕೇಳಿಕೆಯ ಮೇರೆಗೆ ಕೌರವ ಪಡೆಯ ವೀರರನ್ನು ಅವನಿಗೆ ಪರಿಚಯಿಸಿಕೊಡುತ್ತಾನೆ ಭೀಷ್ಮ ದ್ರೋಣ, ದುರ್ಯೋಧನ, ಕರ್ಣ, ಅಶ್ವತ್ಥಾಮ, ಜಯದ್ರದ ಮುಂತಾದವರನ್ನು ತೋರಿ ಅವರ ಪರಾಕ್ರಮವನ್ನು ಬಣ್ಣಿಸಿ ಹೇಳುತ್ತಾನೆ ಯುದ್ಧಕ್ಕೆ ಅನುವಾಗಿ ರದವನ್ನು ಉತ್ತರನು ನಡೆಸುತ್ತಾನೆ ಮದ್ಯೆ ಮದ್ಯದಲ್ಲಿ ಅರ್ಜುನನ ಗಾಂಡೀವದ್ವನಿಯ ಅಬ್ಬರಕ್ಕೆ ತಲ್ಲಣಿಸಿದ ಉತ್ತರನನ್ನು ಅರ್ಜುನನು ಸಮಾದಾನ ಪಡಿಸುತ್ತಾನೆ

ಯುದ್ಧಾಂತ್ಯದಲ್ಲಿ ಅರ್ಜುನನು ಸಮ್ಮೋಹನಾಸ್ತ್ರದಿಂದ ಎಲ್ಲರನ್ನು ಮೂರ್ಛೆಗೊಳಿಸಿದ ಬಳಿಕ ಕರ್ಣ, ದುರ್ಯೋದನ ಮೊದಲಾದವರೆಲ್ಲರ ವಸ್ತ್ರಾಭರಣಗಳನ್ನು ತೆಗೆದುಕೊಳ್ಳುವಂತೆ ಹೇಳಲು ಅದರಂತೆ ಉತ್ತರನು ರದದಿಂದಿಳಿದು ಎಲ್ಲವನ್ನು ತಂದು ರಥದಲ್ಲಿಡುತ್ತಾನೆ ಅನಂತರ ಸಾರದಿತನವನ್ನು ಬಿಟ್ಟು ರಾಜಕುಮಾರನಾಗಿ ನಿಲ್ಲುತ್ತಾನೆ ಯುದ್ಧವನ್ನು ತಾನೇ ಗೆದ್ದೆನೆಂದು ಊರಿಗೆ ಹೇಳಿಕಳುಹಿಸುತ್ತಾನೆ

ಹೀಗೆ ಗಂಡು ಕವಿ ಕುಮಾರವ್ಯಾಸನ ಉತ್ತರನ ಪಾತ್ರ ಒಂದು ಅಪೂರ್ವಸೃಷ್ಟಿ 'ಉತ್ತರನ ಪೌರುಷ ಒಲೆಯ ಮುಂದೆ' ಎಂಬ ನಾಣ್ನುಡಿಗಳು ಹುಟ್ಟಿಕೊಳ್ಳುವಷ್ಟು ಉತ್ತರನ ಪಾತ್ರ ಜನಜನಿತವಾಗಿರುವುದು ಆತ ಜೀವಗಳ್ಳನಾದರೂ ಮಾತಿನ ಮಲ್ಲ ಹೆಂಗಳೆಯರೆದುರಿನಲ್ಲಿ ಕೊಚ್ಚಿಕೊಳ್ಳುವುದರ ಮೂಲಕ ತನ್ನ ಮಾತಿನ ಚಮತ್ಕಾರವನ್ನು ತೋರುವಂತೆಯೇ ಯುದ್ಧ ರಂಗದಲ್ಲಿ ಜೀವಗಳ್ಳರ ಗುರುವಾಗಿ ಮಾತನಾಡುವಾಗಲೂ ಅರ್ಜುನನಿಗೆ ಸರಿ ಉತ್ತರವನ್ನು ಕೊಡುವಲ್ಲಿ ತಾನೊಬ್ಬ 'ವಚನ ವೀರ' ಎಂಬುದನ್ನು ತೋರಿಸಿಕೊಳ್ಳುತ್ತಾನೆ 'ಉತ್ತರನ ಜೀವವೂ ಮಾತಿನಲ್ಲಿ, ಅವನು ಮಾತಿನಲ್ಲಿಯೇ ಹುಟ್ಟಿ ಬೆಳೆದನು ಅವನಿಗೆ ದೊರೆತ ಶಿಕ್ಷಣವೇ ಅದು ನಾಲಿಗೆಯೊಂದೇ ಸುಕುಮಾರನಾದ ಉತ್ತರನ ಪರಿಪುಷ್ಟ ಅವಯವವು. ಮಾತಿನಿಂದಲೇ ಕೌರವನನ್ನು ಕೊಂದು ಮಾತಿನಿಂದಲೇ ರಣಾಂಗಣಕ್ಕೆ ಹೋಗದಂತೆ ಹಿಂದುಳಿಯಬೇಕೆಂದು ಅವನು ಪ್ರಯತ್ನಪಟ್ಟನು'

ಮೊದಲಿಗೆ ವಚನವೀರನಾಗಿಯಷ್ಟೇ ಕಾಣಿಸಿಕೊಂಡು, ಹೇಡಿಯಂತೆ ವರ್ತಿಸುವ ಉತ್ತರಕುಮಾರ ಕೊನೆಯವರೆವಿಗೂ ಹಾಗೆಯೇ ಉಳಿಯುವುದಿಲ್ಲ ಅರ್ಜುನ ಅವನನ್ನು 'ಕಲಿ' ಮಾಡಿದ ಮೇಲೆ ಆತ ಬೇರೆಯಾಗಿಯೇ ಕಾಣಿಸುತ್ತಾನೆ ಅವನ ವರ್ತನೆಯೇ ಬೇರೆಯಾಗುತ್ತದೆ ಆತ ಕೊನೆಯಲ್ಲಿ ಹಾಸ್ಯ ಪಾತ್ರವಾಗಿಯಷ್ಟೇ ಉಳಿಯದೆ, ಗಂಭೀರತೆಯ ಸೋಂಕನ್ನು ಪಡೆದವನಾಗಿ ಕಂಡು ಬರುತ್ತಾನೆ ಅರ್ಜುನನ ಸಹವಾಸ ಅವನಲ್ಲಿ ಈ ಎಲ್ಲ ಬದಲಾವಣೆಗಳನ್ನು ಮಾಡುತ್ತದೆ

ಬೇಂದ್ರೆಯವರು ಉತ್ತರನ ಬಗ್ಗೆ ಹೇಳುತ್ತಾರೆ- 'ಆಡಿ ಮಾಡದಿರುವುದೇ ಉತ್ತರನ ಪಾತ್ರದ ವೈಶಿಷ್ಟ್ಯ ಇವನು ಹೇಡಿ ಇರಬಹುದು ಮಾತಿನ ಹೇಡಿಯಂತೂ ಅಲ್ಲ?

ಎಸ್ ವಿ ರಂಗಣ್ಣನವರು ಹೇಳುತ್ತಾರೆ-- 'ಹೇಳಿ ಮಾಡಿಸಿದ ಹೇಡಿ ಭೂಮಿಂಜಯ ಉತ್ತರ ಮುಂದೆ ಯುದ್ಧದಲ್ಲಿ ಶಲ್ಯನೇ ಮೆಚ್ಚುವಂತೆ ಕಾದಾಡಿ ಕೊನೆಗೆ ಅವನಿಂದ ಹತನಾದನೆಂದು ಮಹಾಭಾರತ ಅರುಹುತ್ತದೆ, ಅಂಜುಬುರುಕ ಹೇಗೆ ಕಡುಗಲಿಯಾದ ನೆಂಬುದನ್ನು ಕುಮಾರವ್ಯಾಸ ಚೆನ್ನಾಗಿ ಬಿಡಿಸಿದ್ದಾನೆ ಬೃಹನ್ನಳೆ ದನಂಜಯನಾಗುವ ಪರಿವರ್ತನೆ, ನಪುಂಸಕ ಪುರುಷಸಿಂಹನಾಗುವ ಪರಿವರ್ತನೆ ಉತ್ತರನ ಕಣ್ಣೆದಿರು ನಡೆಯುತ್ತದೆ ಅವನ ಅಂತರ್ಯದಲ್ಲೂ ಬದಲಿಕೆಯ ಪ್ರಾರಂಭ ಆಗದೆ ಇರುವುದೆ?"

ಒಟ್ಟಿನಲ್ಲಿ ಈ ಪ್ರಕರಣ ಕುಮಾರವ್ಯಾಸನ ನಾನಾ ಶಕ್ತಿಗಳಿಗೆ ಒಂದು ಕನ್ನಡಿ ಉತ್ತರನ ಪಾತ್ರ ಸಾಹಿತ್ಯ ಲೋಕದಲ್ಲಿ ಅಮರವಾದದು



# ಭಗವಂತನ ವಿಸ್ಮರಣೆ

---ಮನುಪ್ರಿಯ

"ಗಂಡಕೀ" ನದಿಯ ಪವಿತ್ರ ಪರಿಸರ ಗಂಡಕೀ ನ್ನ ಪಾವಿತ್ರ್ಯತೆಯಿಂದ ಸುತ್ತಲಿನ ಪರಿಸರವನ್ನು ುಂಗಳಕರವನ್ನಾಗಿ ಮಾಡಿದ್ದಾಳೆ ಸಮುದ್ರರಾಜ ನ್ನು ಸೇರುವ ತವಕದಿಂದ ಮಂದಗಮನೆಯಾಗಿ ುರಿಯುವ ಗಂಡಕಿಯ ತಟ, ಅತ್ಯಂತ ಪ್ರಶಾಂತ ಾದ ವಾತಾವರಣವನ್ನು ಹೊಂದಿದೆ ಯೋಗಿ ರೇಣ್ಯರ ತಪಕ್ಕೆ ಯೋಗ್ಯವಾದ ಸ್ಥಳವದು ುತೆಯೇ ಅಲ್ಲಿ ಪುಲಹರ ಮುಂತಾದ ಮಹರ್ಷಿ ಳು ಆಶ್ರಮವನ್ನು ಮಾಡಿಕೊಂಡು ಅನುದಿನವೂ ಗವಂತನನ್ನು ಕುರಿತು ತಪಗೈಯುತ್ತಿದ್ದಾರೆ

ಈ ನದಿಯಲ್ಲಿ ಅದೊಂದುಸಲ ತುಂಬು ಗರ್ಭಿ ಯಾದ ಜಿಂಕೆಯೊಂದು ದಾಹದಿಂದ ಕೂಡಿ ುಂಡು, ನೀರನ್ನು ಕುಡಿಯಲು ನೀರಿಗೆ ಬಾಯಿ ುನ್ನು ಹಚ್ಚಿದೆ ಒಡನೆಯೇ ಒಡಲಾಳವನ್ನು ೇದಿಸುವ ಹುಲಿಯ ಗರ್ಜನೆಯು ವಾತಾವರ ುದ ಪ್ರಶಾಂತತೆಯನ್ನು ಕಲುಕಿತು ಬಯಗ್ರ ವಾದ ಜಿಂಕೆಯು ಜೀವಬಯದಿಂದ ತತ್ತರಿಸಿ, ೀರು ಕುಡಿಯುವದನ್ನು ಬಿಟ್ಟು, ಜಿಗಿದು ಪಾರಾ ಲು ಯತ್ನಿಸಿತು ಜಿಗಿಯುವಾಗ ಪ್ರಸವವಾಗಿ ುಂಕೆಯಮರಿಯು ನೇರವಾಗಿ ಪ್ರವಾಹಕ್ಕೆ ಬಿದ್ದಿತು ುಯ ಮತ್ತು ಪ್ರಸವವೇದನೆಯನ್ನು ತಡೆಯಲಾ ದೆ, ಓಡಿದ ಜಿಂಕೆಯು ಪ್ರಾಣವನ್ನು ಬಿಟ್ಟಿತು ಇತ್ತ ್ರವಾಹಕ್ಕೆ ಸಿಲುಕಿದ ಜಿಂಕೆಯ ಮರಿಯು ಇನ್ನೇನು ಪ್ರಾಣವನ್ನು ಬಿಡಲಿದೆ

ಅದೇ ಸಮಯದಲ್ಲಿ, ಸ್ನಾನವನ್ನು ಮಾಡಿ ನಿತ್ಯಾ ್ನಿಕಗಳಿಗಾಗಿ ಕುಳಿತ ವ್ಯಕ್ತಿಯೋರ್ವನು ದೂರ ುದ ಇದೆಲ್ಲವನ್ನು ನೋಡುತ್ತಿದ್ದಾನೆ ಅವನಲ್ಲಿ ರುಣೆಯ ಮಹಾಪೂರವೇ ಹರಿದು ಬಂದಂತಾ ಯಿತು ಕೂಡಲೇ ಪ್ರವಾಹದಲ್ಲಿ ತೇಲುತ್ತಾಬ ುತ್ತಿರುವ ಜಿಂಕೆಯ ಮರಿಯನ್ನು ಎರಡೂ ಕೈಗ ುದ ಎತ್ತಿಕೊಂಡು, ಮೃದುವಾಗಿ ಅದರಮೇಲೆ ಸವರಿದ, ಮೈಯಲ್ಲಾ ರೋಮಾಂಚನವಾದಂತಾ ಯಿತು, ಜನ್ಮಾಂತರದ ಬಂದುವನ್ನು ಪಡೆದ ಸಂತಸ ಾದಂತಾಯಿತು ತಾನು ವಾಸಿಸುವಲ್ಲಿ ಜಿಂಕೆಯ ುರಿಯನ್ನು ತೆಗೆದುಕೊಂಡು ಬಂದು, ಅದಕ್ಕೆ ಪ್ರತಿ ನ ಆಹಾರವನ್ನು ಕೊಡುವುದು, ತಾನು ಹೊರಗಡೆ ೋದಾಗ ಮೃಗಾದಿಗಳಿಂದ ತೊಂದರೆ ಯಾಗಬ ುದೆಂದು ಅದನ್ನು ತನ್ನ ತಲೆಯ ಮೇಲೆ ಹೊತ್ತು ುಡು ಹೋಗುವುದನ್ನುಮಾಡತೊಡಗಿದೆ ಅವನ ುನದಲ್ಲಿ ಯಾವಾಗಲೂ ಜಿಂಕೆಯ ಯೋಗ ೇಮವೇ ಮನೆಮಾಡತೊಡಗಿತು ಜಿಂಕೆಯ ುರಿಯು ಮುದ್ದುಮುದ್ದಾಗಿ ಓಡಾಡುವಾಗ, ತನ್ನ ುತ್ತುಮುತ್ತು ಹರಿದಾಡುವಾಗ ತನಗೆ ಅಪಾರ ಾದ ಆನಂದವುಂಟಾಗುತ್ತಿತ್ತು ತಾನು ಪೂಜಾದಿಗ ಳನ್ನು ಮಾಡುವಾಗ, ಮದ್ಯ ಮದ್ಯದಲ್ಲಿ ಜಿಂಕಯತ್ತ ನೋಡಿ, ಅದು ಸುರಕ್ಷಿತವಾಗಿರುವದನ್ನು ಖಚಿತಪ ಡಿಸಿಕೊಳ್ಳುತ್ತಿದ್ದನು ಜಿಂಕೆಯ ಮೇಲಿನ ಅತಿಯಾದ ವ್ಯಾಮೋಹಾದಿಗಳು ಮನಸ್ಸಿನ ಚಂಚಲತೆಗೆ ಕಾರ ಣವಾಗತೊಡಗಿತು ಪೂಜಾದಿಗಳನ್ನು ಮಾಡು ವುದನ್ನು ಕಡಿಮೆಮಾಡುತ್ತಾ, ಕೊನೆಗೆ ಎಲ್ಲವನ್ನೂ ತೊರೆದು, ಜಿಂಕೆಯ ಒಡನಾಟದಲ್ಲಿ ಕಾಲವನ್ನು ಕಳೆ ಯತೊಡಗಿದ

ಇದರಲ್ಲೇನು ವಿಶೇಷವೇ ? ಹೌದು, ಈ ವ್ಯಕ್ತಿಯು ಸಾದಾರಣಮನುಷ್ಯನಲ್ಲ ತನ್ನ ಜೀವ ನದಲ್ಲಿ ವೈರಾಗ್ಯವನ್ನು ಕಂಡುಕೊಂಡು, ಪತ್ನಿ -- ಪುತ್ರಾದಿಗಳನ್ನು, ಅಪಾರವಾದ ಸಂಪದ್ಭರಿತವಾದ ಸಾಮ್ರಾಜ್ಯ ಎಲ್ಲವನ್ನು ನಶ್ವರವೆಂದು ತಿಳಿದು, ಜೀವ ನದ ಉಳಿದ ಸಮಯದಲ್ಲಿಯಾದರೂ ಭಗವಂತ ನನ್ನು ಒಲಿಸಿಕೊಳ್ಳುವುದಕ್ಕಾಗಿ, ಪುಲಹರ ಮಹರ್ಷಿ ಗಳ ಆಶ್ರಮದಲ್ಲಿದ್ದ ಬರತ ಚಕ್ರವರ್ತಿಯಾತ ತನ್ನ ರಾಜ್ಯವನ್ನು ಮಕ್ಕಳಿಗೆ ಒಪ್ಪಿಸಿ ಪುಲಹರರ ಆಶ್ರಮ ವಾದ ಸಾಲಗ್ರಾಮ ಕ್ಷೇತ್ರಕ್ಕೆ ಬಂದಿದ್ದ ಇಲ್ಲಿಯೇ ಸಾಲಗ್ರಾಮಗಳಿಂದ ಕೂಡಿದ ಗಂಡಕೀ ನದಿಯು ಹರಿಯುತ್ತಿತ್ತು ಈ ರೀತಿಯಾಗಿ ಎಲ್ಲವನ್ನು ತೊರೆದು, ಬಗವಂತನ ಅನುಗ್ರಹಕ್ಕಾಗಿ ತಪಗ್ಯೆ ಯಲು, ಬಂದ ಭರತಚಕ್ರವರ್ತಿಯು ಭಗವಂತ ನನ್ನು ಮರೆತು, ಜಿಂಕೆಯ ಒಡನಾಟದಲ್ಲಿ ಕಾಲ ವನ್ನು ಕಳೆಯತೊಡಗಿದ

ಕಾಲಚಕ್ರ ಉರುಳಿತು, ಭರತಚಕ್ರವರ್ತಿಯ ಅಂತ್ಯಕಾಲ ಸಮಿಾಪಿಸಿತು ಜೀವನದಲ್ಲಿ ಸರ್ವಸ್ವ ವನ್ನು ತೊರೆದ ಈ ಚಕ್ರವರ್ತಿಗೆ, ಜಿಂಕೆಯನ್ನು ತೊರೆ ಯಲಾಗಲಿಲ್ಲ ಆದರೇನು ಮಾಡುವುದು, ತನ್ನೊಂ ದಿಗೆ ಜಿಂಕೆಯನ್ನು ಕರೆದುಕೊಂಡು ಹೋಗಲು ಸಾಧ್ಯವೇ ? ಜಿಂಕೆಯಾದರೂ ಇವನ ಅಂತ್ಯಕಾ ಲದಲ್ಲಿ ಇವನನ್ನೇನೋಡುತ್ತಾ, ಕಣ್ಣೀರು ಸುರಿಸುತ್ತಾ ನಿಂತಿತ್ತು ಜಿಂಕೆಯನ್ನು ನೋಡುತ್ತಲೇ ಭರತಚಕ್ರವ ರ್ತಿಯು ದೇಹತ್ಯಾಗವನ್ನು ಮಾಡಿದನು

"ಯಂ ಯಂ ವಾಸಿ ಸ್ಮರನ್ ಭಾವಂ
ತ್ಯಜತ್ಯಂತೇ ಕಲೇವರಂ,
ತಂ ತಮೇವೈತಿ ಕೌಂತೇಯ
ಸದಾ ತದ್ಭಾವ ಭಾವಿತ

ಎಂಬ ಗೀತಾಚಾರ್ಯನ ಸಂದೇಶದಂತೆ, ಯಾರು ತಮ್ಮ ಅಂತ್ಯಕಾಲದಲ್ಲಿ ಯಾವುದನ್ನು ಸ್ಮರಿಸುತ್ತಾ ದೇಹ ತ್ಯಾಗವನ್ನು ಮಾಡುವರೋ, ಅವರು ಮುಂದಿನ ಜನ್ಮದಲ್ಲಿ ಅದೇ ಜನ್ಮವನ್ನು ಹೊಂದುವರು. ಅಂತೆಯೇ ಬರತಚಕ್ರವರ್ತಿಯು ಸಹ ಮುಂದಿನ ಜನ್ಮದಲ್ಲಿ ಜಿಂಕೆಯಾಗಿ ಹುಟ್ಟಬೇಕಾಯಿತು.

ಕರ್ಮಜದೇವತೆಯಾದ ಭರತಚಕ್ರವರ್ತಿಗೆ ಜಿಂಕೆಯ ಜನ್ಮಬಂದಾಗ ಬಗವಂತನ ಅನುಗ್ರಹ ದಿಂದ ಪೂರ್ವಜನ್ಮದ ಸ್ಮರಣೆಯಿತ್ತು ತನಗ ಜಿಂಕೆಯ ಜನ್ಮಬರಲು ಉಂಟಾದಕಾರಣದ ಅರಿವು ಅವನಲ್ಲಿತ್ತು ಜಿಂಕೆಯ ಜನ್ಮದಲ್ಲಿ ಪರಿಪರಿಯಾಗಿ ಪಶ್ಚಾತ್ತಾಪಪಟ್ಟ, ಈ ಜನ್ಮದಲ್ಲಾದರೂ ಯಾರೋ ಬ್ಬರ ಮೇಲೆ ಅಭಿಮಾನವನ್ನು ಬೆಳಸಿಕೊಳ್ಳಬಾರ ದೆಂದು ತಿಳಿದು, ಎಲ್ಲರನ್ನು ತೊರೆದು, ತನ್ನ ಸ್ಥಳ ವಾದ ಕಾಲಂಜರಪರ್ವತವನ್ನು ಬಿಟ್ಟು, ಗಂಡಕೀ ತಟದ ಸಾಲಗ್ರಾಮ ಕ್ಷೇತ್ರಕ್ಕೆ ಬಂದನು ತನ್ನ ಮೃಗದೇಹ ಮುಗಿಯುವವರೆಗೆ ಕಾದುಕೊಂಡಿದ್ದು, ನಂತರ ಅದೇ ತೀರ್ಥದಲ್ಲಿಹಾರಿ ತನ್ನ ಪ್ರಾಣ ವನ್ನು ಕಳೆದುಕೊಂಡು, ಜನ್ಮಾಂತರದಲ್ಲಿ ಭಗವಂ ತನ ಅನುಗ್ರಹಕ್ಕೆ ಪಾತ್ರವಾದನು

ರಾಜ್ಯಾದಿಗಳನ್ನು ತೊರೆದು ವಿರಕ್ತಿಯಿಂದ ತಪ ಗೈಯಲು ಬಂದ ಭರತಚಕ್ರವರ್ತಿಯು, ಸಾಮಾ ನ್ಯವಾದ ಜಿಂಕೆಯಮೇಲಿನ ವ್ಯಾಮೋಹದಿಂದ ತಾನೂ ಜಿಂಕೆಯ ಜನ್ಮವನ್ನು ಹೊಂದಬೇಕಾಯಿತು ಈ ಭರತಚಕ್ರವರ್ತಿಯು ಮಹಾಭಗವದ್ಭಕ್ತನಾಗಿ ದ್ದವನು, ತನ್ನ ಜೀವನದಲ್ಲಿ ಯಜ್ಞ -- ಯಾಗಾ ದಿಗಳನ್ನು ಮಾಡುತ್ತಾ, ರಾಜ್ಯವನ್ನು ಧರ್ಮದಿಂದ ಆಳುತ್ತಾ, ಪ್ರಜೆಗಳ ಪ್ರೀತಿಗೆ ಪಾತ್ರನಾಗಿದ್ದ ತನ್ನ ಆಯುರ್ಮಾನವನ್ನು ಭಗವಂತನ ಪೂಜೆಗಾಗಿ ವಿಶಿ ಷ್ಟವಾಗಿ ಬಳಸಿಕೊಂಡು, ಭಗವಂತನಲ್ಲಿ ಭಕ್ತಿ ಯನ್ನು ಸಂಪಾದಿಸಿಕೊಂಡಿದ್ದನು ಆದರೇ, ತನ್ನ ಜೀವನದ ಕೆಲವು ಸಮಯದ ಭಗವಂತನ ವಿಸ್ಮರ ಣೆಯು ಜಿಂಕೆಯ ಜನ್ಮಬರಲು ಕಾರಣವಾಯಿತು ಇದರಂತೆಯೇ ಬಂಧು -- ಬಾಂಧವರ ಮೇಲಿನ ವ್ಯಾಮೋಹಾದಿಗಳು ಮಾನವನ ಉನ್ನತಿಗೆ ಬಾಧಕ ವೆಂಬುದು ಶ್ರೀ ಮದ್ಭಾಗವತದ ಪಂಚಮಸ್ಕಂದದ ಈ ರೋಚಕ ಪ್ರಸಂಗದಿಂದ ತಿಳಿದುಬರುತ್ತದೆ. ♣

ಸಾಯಂಕಾಲ ದೈನಿಕಪೂಜೆಯನ್ನು ಮಾಡಿದ ನಂತರ ರಾತ್ರಿಯಲ್ಲಿ ದರ್ಮತತ್ವದ ಚಿಂತನೆಯನ್ನು ಮಾಡುತ್ತಲಿದ್ದ ಒಬ್ಬ ಭಕ್ತನಿಗೆ ಒಮ್ಮಿಂದೊಮ್ಮೆಲೇ ನಿದ್ರೆ ಬಂದಿತು ಪರಮಾತ್ಮನ ದಿವ್ಯಮೂರ್ತಿಯು ಅವನ ಮನೆಯ ದೇವಮಂದಿರದಲ್ಲಿ ಶೋಬಾಯ ಮಾನವಾಗಿತ್ತು ದೇವಿ ದೇವತೆಗಳ ಚಿತ್ರಗಳು ಗೋಡೆಗೆ ಕಳೆಯನ್ನುಂಟುಮಾಡಿದ್ದವು. ಸಂಪೂರ್ಣ ವಾತಾವರಣವು ಈಶ್ವರೀಯ ತತ್ವದಿಂದ ಸುಗಂದಿ ತವಾಗಿತ್ತು ವಿವಿದ ದೃಷ್ಟಿಕೋನದಿಂದ ದರ್ಮದ ಬಗ್ಗೆ ವಿಚಾರಮಾಡುತ್ತಿದ್ದ ಭಕ್ತನಿಗೆ ಯಾವಾಗ ನಿದ್ರೆ ಬಂದಿತೋ ತಿಳಿಯಲಿಲ್ಲ

ದರ್ಮವೆಂದರೇನು? ಅದರ ಲಕ್ಷಣಗಳ ವಿಸ್ತಾರವಾದ ಅರ್ದವ್ಯಾಪ್ತಿ ಏನು? ಯಾವ ವ್ಯಕ್ತಿಯನ್ನು ನಿಜವಾದ ಅರ್ದದಲ್ಲಿ ದಾರ್ಮಿಕ ಮನುಷ್ಯನೆಂದು ಹೇಳಬೇಕು ? ನಿಜವಾದ ದಾರ್ಮಿಕ ವ್ಯಕ್ತಿಗೆ ತನ್ನ ಬಾಳಿನಲ್ಲಿ ಯಾವ ಯಾವ ದೈವೀಗುಣಗಳನ್ನು ವಿಕಸಿತಗೊಳಿಸಬೇಕಾಗುವುದು ? ಎಂದು ಮುಂತಾದ ವಿವಿದ ವಿಷಯಗಳನ್ನು ಯೋಚಿಸುತ್ತಿರುವಾಗ ನಿದ್ರಾದೇವಿಯು ಅವನನ್ನು ತನ್ನ ಮಡಿಲಲ್ಲಿ ಯಾವಾಗ ಮಲಗಿಸಿಕೊಂಡಳೋ ತಿಳಿಯಲಿಲ್ಲ ಈಗ ತೈಜಸನ ವ್ಯಾಪಾರ ಪ್ರಾರಂಭವಾಯ್ತು ಭಕ್ತನು ಸ್ವಪ್ನ ಜಗತ್ತಿನಲ್ಲಿ ಉನುಕ್ತನಾಗಿ ಸಂಚರಿಸ ತೊಡಗಿದನು ಅವನು ಸ್ವಪ್ನದಲ್ಲಿ ನೋಡಿದನು

"ಏನಿದು! ನನ್ನ ಬಾಗಿಲನ್ನು ಯಾರು ಬಡಿಯುತ್ತಿದ್ದಾರೆ! ಈ ಸದ್ದು ಎಲ್ಲಿಯದು?"

"ಭಕ್ತ, ಬಾಗಿಲು ತೆಗೆ ನಿನ್ನ ಮನಮಂದಿರದ ಕವಾಟಗಳನ್ನು ತೆಗೆ ನೀನು ನನ್ನನ್ನು ಶ್ರದ್ಧಾಪೂರ್ವಕ ಸ್ಮರಿಸಿರುವಿ ಮನಸ್ಸಿನಲ್ಲಿ ನನ್ನನ್ನೇ ಕುರಿತು ಚಿಂತನೆ ಮಾಡುತ್ತಿರುವಂತೆ ಕಾಣುತ್ತದೆ ಇಗೋ, ನೋಡು ನಾನು ಬಂದಿದ್ದೇನೆ"

ವಿಸ್ಮಯ ಚಕಿತನಾದ ಭಕ್ತನು ಬಾಗಿಲು ತೆಗೆದನು ಹೊರಗೆ ಇಣಕಿ ನೋಡಿದನು ಹಾಲಿನಂತಹ ಶ್ವೇತವಸ್ತ್ರ, ಪರಮ ಪವಿತ್ರವಾದ ನಿರಾಡಂಬರ ವೇಷಭೂಷಣ, ಮುಖಮಂಡಲದಲ್ಲಿ ಮದುರ ಸ್ಮಿತದಿಂದೊಡಗೂಡಿದ, ಅಮೃತವೃಷ್ಟಿಗರೆವಂತಹ ಒಬ್ಬ ದೇವ ಪುರುಷನು ಅವನ ಬಾಗಿಲವನ್ನು ತಟ್ಟುತ್ತಿದ್ದನು

"ಮಹಾತ್ಮರೇ, ತಮ್ಮನ್ನು ಗುರುತಿಸುವುದಾಗಲಿಲ್ಲ" ಭಕ್ತನು ತನ್ನ ಜಿಜ್ಞಾಸೆಯನ್ನು ಪ್ರಕಟಿಸಿದನು

"ನೀನು ನನ್ನನ್ನು ಗುರುತಿಸಲಿಲ್ಲವೇ? ನಾನು ಅವನೇ" ದೇವಪುರುಷ ಉತರಿಸಿದನು

"ಅವನೇ! ಅವನೇ ಯಾರು?" ಭಕ್ತ ಕೇಳಿದನು

"ಬಹು ಸಮಯದಿಂದಲೂ ನೀನು ಶ್ರದ್ಧಾಪೂರ್ವಕವಾಗಿ ಚಿಂತನ, ಸ್ಮರಣೆ ಮಾಡುತ್ತಿರುವವಿಯಲ್ಲವೇ? ಅವನೇ ನಾನು ಅದೇ "ದರ್ಮ" ನೆಂಬುವನು ನೀನು ವಿಶ್ವಾಸಪೂರ್ವಕವಾಗಿ ಬೆಳಗ್ಗೆ -- ಸಾಯಂಕಾಲ ಪೂಜೆ, ಆರಾದನೆಯನ್ನು ಮಾಡುತ್ತಿರುವೆಯಲ್ಲವೇ? ಅವನೇ ನಾನು ಯಾರಿಗಾಗಿ ನೀನು ನಿನ್ನನ್ನೇ ಸಂಪೂರ್ಣವಾಗಿ ಸಮರ್ಪಿತವೆಂದು ತಿಳಿದಿರುವೆಯೋ, ಅವನೇ ಸಶರೀರನಾದ ನಾನು ನೀನು ನನ್ನನ್ನು ಪ್ರೇಮ ಪೂರ್ವಕವಾಗಿ ಕರೆದೆ ನೋಡು, ನಿನ್ನನ್ನು ಕಾಣಲು ನಾನೇ ಇಲ್ಲಿ ಬಂದಿದ್ದೇನೆ ಬಾಗಿಲು ತೆರೆ, ನಾನು ಪ್ರವೇಶಿಸುವಂತೆ ಮಾಡು" ದೇವಪುರುಷನು ಉತ್ತರಿಸಿದನು

# ಧರ್ಮಸ್ವರೂಪ

"ನಾನು ನಿಮ್ಮ ಮಾತಿನ ಅಂತರಾರ್ದವನ್ನು ತಿಳಿಯಲಿಲ್ಲ" ಭಕ್ತ ಹೇಳಿದನು

"ಭಕ್ತನೇ, ನಾನು ದರ್ಮ ಶರೀರದಾರಣಮಾಡಿ ಬಂದಿದ್ದೇನೆ ನಿನ್ನ ಪೂಜೆ, ಚಿಂತನೆ ಮತ್ತು ಆರಾದನೆಯ ಕೇಂದ್ರ ಬಿಂದುವಾದ 'ದರ್ಮ'ನಾಗಿದ್ದೇನೆ 'ರಾಜ್ಯಲಕ್ಷ್ಮಿಯು ಇಂದೇ ಹೋಗಲಿ, ನನ್ನ ಮೇಲೆ ಮೊನಚಾದ ಖಡ್ಗ ಇಂದೇ ಬೀಳಲಿ, ಯಮರಾಜನು ಇಂದೇ ನನ್ನ ಶಿರವನ್ನು ತರಿಯಲಿ ಆದರೆ ದರ್ಮದಿಂದ ಮಾತ್ರ ನನ್ನ ಬುದ್ಧಿಯು ಸ್ವಲ್ಪವೂ ವಿಚಲಿತವಾಗದಿರಲಿ! ಎಂದು ನೀನೇ ಹೇಳಿದ್ದೆಯಲ್ಲವೇ? ಅದನ್ನು ಜ್ಞಾಪಿಸಿಕೊ ಅದೇ ದರ್ಮ ಸಾಕಾರವಾಗಿ ಸ್ವತ ನಿನ್ನನ್ನು ಕಾಣಲು ಬಂದಿದ್ದೇನೆ ಬಾಗಿಲು ತೆರೆ, ನನ್ನನ್ನು ಒಳಗೆ ಬರಗೊಡು" ಭಕ್ತನು ಆಶ್ಚರ್ಯದಲ್ಲಿ ಮುಳುಗಿದ್ದನು

ಧೃತಿ ಕ್ಷಮಾದಮೋಽಸ್ತೇಯಂ
ಶೌಚಮಿಂದ್ರಿಯನಿಗ್ರಹ
ಧೀರ್ವಿದ್ಯಾ ಸತ್ಯಮಕ್ರೋದೋ
ದಶಕಂ ದರ್ಮಲಕ್ಷಣಮ್

ಭಕ್ತ -- ಆದರೆ ದೇವ! ತಮ್ಮೊಂದಿಗೆ ಇನ್ನೂ ಕೆಲವು ವ್ಯಕ್ತಿಗಳು ನಿಮ್ಮ ಹಿಂದೆ ಇದ್ದಂತೆ ಕಾಣುತ್ತಿದೆ ಅರೇ, ಇವರು ಹತ್ತು ಜನರಿದ್ದಾರೆ, ಅವರಲ್ಲಿ ಮಹಿಳೆಯರೂ ಜೊತೆಗಿದ್ದಾರೆ ದರ್ಮರಾಜರೇ ! ನನ್ನ ಅಸಭ್ಯತೆಯನ್ನು ಮನ್ನಿಸಿ ಇಷ್ಟು ಜನಸಜ್ಜನರನ್ನು ನಾನು ಅಮಂತ್ರಿಸಿರಲಿಲ್ಲ ಈ ಗುಂಪು ? ನಿಮ್ಮೊಂದಿಗಿದ್ದ ಇವರಾರು?

ದರ್ಮ -- ಭಕ್ತನೇ ಸಂಶಯಪಡಬೇಡ ಇವರೆಲ್ಲರೂ ಅಪ್ರತ್ಯಕ್ಷರೂಪದಿಂದ ಸದಾ ನನ್ನ ಜೊತೆಗೇ ಇರುತ್ತಾರೆ ನೀನು ಇವರನ್ನು ನನ್ನವೇ ಅಂಗ ಪ್ರತ್ಯಂಗವೆಂದು ತಿಳಿ, ಇವರನ್ನು ಬಿಟ್ಟು ನಾನು ಒಂದು ನಿಮಿಷವೂ ಹೊರಗೆ ಹೋಗುವುದಿಲ್ಲ ಹೀಗಿರುವುದೇ ನನ್ನ ಸ್ವಭಾವವಾಗಿದೆ

ಭಕ್ತ --ಆದರೆ ದರ್ಮರಾಜಾ ! ನಿಮಗೆ ಹೊಂದಿಕೊಂಡು ನಿಂತು ನಿಮ್ಮೊಂದಿಗೆ ಬಲವಂತವಾಗಿ ಒಳಗೆ ನುಗ್ಗುತ್ತಿದ್ದಾರಲ್ಲ ಇವರಾರು? ನಿಮ್ಮಿಂದ ಕದಲುತ್ತಲೇ ಇಲ್ಲ! ಅದ್ಭುತವ್ಯಕ್ತಿ!

ದರ್ಮ --(ಆ ವ್ಯಕ್ತಿಯನ್ನು ಪ್ರೀತಿಯಿಂದ ಒಳಗೆ ಕರೆತರುತ್ತ) ಭಕ್ತನೇ ಇವನು ದೈರ್ಯ ದೈರ್ಯನನ್ನು ನನ್ನ ಬಲಗೈಯೆಂದು ತಿಳಿ

ಅದ್ಯಾತ್ಮಮಾರ್ಗದಲ್ಲಿ ಎಷ್ಟೋ ಅಡೆತಡೆಗಳು ಬರುತ್ತವೆ ಅನೇಕ ವಿಘ್ನ -- ಬಾದೆಗಳು ಕಾಡುತ್ತವೆ, ವಿವಿದ ಸಾಂಸಾರಿಕ ಪ್ರಲೋಬಗಳು ತಳಮಳಗೊಳಿಸುತ್ತವೆ ಅನೇಕ ವಿದ ಸಾಂಸಾರಿಕ ಚಿಂತೆಗಳು ಮತ್ತು ಬಹುವಾದ ಚಿಕ್ಕ ಪುಟ್ಟ ಅಡೆತಡೆಗಳು ಉದ್ವಿಗ್ನಗೊಳಿಸುತ್ತವೆ, ವಾಸನಾಮಯ ಆಕರ್ಷಣೆಯಾದರೂ ತದ್ಯಹೀನ ವಿಲಾಸಸುಖೋಪ ಭೋಗಗಳನ್ನು ತ್ಯಜಿಸಿ ಅದ್ಯಾತ್ಮಮಾರ್ಗವನ್ನು ಕಠೋರ, ನೀರಸ ಮತ್ತು ಸಾದನಾಮಯವೆಂದು ತಿಳಿ ಅದಿಕ ಬೆಲೆಬಾಳುವ ವಸ್ತುವನ್ನು ಪಡೆಯಲು, ಕಡಿಮೆ ಬೆಲೆಯ ವಸ್ತುವನ್ನು ತ್ಯಜಿಸಬೇಕಾಗುತ್ತದೆ ಬಹುಕಾಲ ಬಾಳುವ ಶಾಶ್ವತ ಸುಖ ಮತ್ತು ತೃಪ್ತಿ ದೊರೆಯುತ್ತದೆ ಅದಕ್ಕಾಗಿ ಸಾದನೆಯಲ್ಲಿ ಕಷ್ಟವನ್ನು ಸಹಿಸಬೇಕಾಗುತ್ತದೆ ಇವೆಲ್ಲ ಕಷ್ಟಗಳನ್ನು ಸಹಿಸಲು "ದೈರ್ಯ"ದ ಅವಶ್ಯಕತೆಯುಂಟು ಕಠೋರವಾದ ಕರ್ತವ್ಯಪಾಲನೆಯಲ್ಲಿ ಇವರದೇ ಆದಾರ

ಭಕ್ತ - (ಮಾತಿನ ಆಳವನ್ನರಿತು) ದರ್ಮರಾಜರೇ, ಹಾಗಾದರೆ ಈ ಸಜ್ಜನರು ನನ್ನ ಸಾಧನೆಯಲ್ಲಿ ತುಂಬಾ ಲಾಭದಾಯಕರಾಗಿ ಸಿದ್ಧರಾಗುತ್ತಾರೆ ಕೃಪೆ ಮಾಡಿ ಅವರನ್ನೂ ಕೂಡಾ ತಮ್ಮೊಂದಿಗೆ ಒಳಗೆ ಕರೆತನ್ನಿ ದೈರ್ಯ ದೇವರೇ, ತಮಗೂ ಸಹರ್ಷಸ್ವಾಗತ, ತಾವು ನನ್ನ ಮನ ಮಂದಿರದಲ್ಲಿ ಪ್ರವೇಶಿಸಲು ಬಿನ್ನಹ ನಾನು ಮಾಡುವ ಆರಾದನೆಯಲ್ಲಿ ಆಸರೆಯಾಗಿ, (ದೈರ್ಯ ದೇವತೆಯೂ ಒಳಗೆ ಪ್ರವೇಶಿಸುತ್ತಾರೆ ಭಕ್ತನು ಹೊರಗೆ ನಿಂತ ವ್ಯಕ್ತಿಗಳನ್ನು ನೋಡಿ

ಆಶ್ಚರ್ಯದಿಂದ) ಇವರ ಹಿಂದಂತೂ ಯಾರೋ ಶ್ರೇಷ್ಠಳಾದ ಮಹಿಳೆ ನಿಂತಿದ್ದಾಳೆ ಏನು? ಇವಳೂ ಒಳಗೆ ಬರುವಳೇ? ಯಾರು ಈ ದೇವಿ?

ದರ್ಮ - (ಆ ದೇವಿಯನ್ನು ಪರಿಚಯ ಮಾಡಿ ಕೊಡುತ್ತ) ಈ ದೇವಿಯ ಹೆಸರು ಕ್ಷಮಾ ಆದ್ಯಾತ್ಮ ಸಾದನೆಯಲ್ಲಿ ಅನೇಕ ದುರ್ಜನ ವ್ಯಕ್ತಿಗಳು ನಿನ್ನನ್ನು ಅಸತ್ಯ ಹಾಗೂ ಸಾರಹೀನವಾಗಿ ಟೀಕಿಸುತ್ತಾರೆ, ದುರ್ವಚನಗಳನ್ನಾಡುತ್ತಾರೆ, ಬಯ್ಯುತ್ತಾರೆ ಅಲ್ಲದೇ ತಿರಸ್ಕಾರ ಮತ್ತು ಅಪಮಾನವನ್ನು ಮಾಡುತ್ತಾರೆ ಇಲ್ಲಸಲ್ಲದನ್ನು ಹೇಳುತ್ತಾರೆ ಇಂತಹ ಪ್ರತಿಯೊಂದು ಸಮಯದಲ್ಲಿಯೂ ನಿನಗೆ ಈ "ಕ್ಷಮಾ" ದೇವಿಯ ಸಹಾಯ ಬೇಕಾಗುತ್ತದೆ ನಿರ್ಮಾಣ ಮತ್ತು ಶಾಂತಿ, ಉನ್ನತಿ ಮತ್ತು ಪ್ರಗತಿ, ವಿಶ್ರಾಮ ಮತ್ತು ಮನೋರಂಜನ ಸರ್ವತ್ರ ದುರ್ಜನರ ಅಶಿಷ್ಟತೆಯನ್ನು ಮನ್ನಿಸಿ ನಿರಂತರವೂ ಮುಂದೆ ಸಾಗಬೇಕಾಗುವುದು ವ್ಯರ್ದವಾದ ಕಾದಾಟ ಅಥವಾ ಬಡಿದಾಟದಿಂದ ಕರಿಣತೆ ಹೆಚ್ಚುತ್ತದೆ ಕಠೋರತೆ ಬೆಳೆಯುತ್ತದೆ ದುಷ್ಟ, ಶಠ ಸ್ವಾರ್ದ ಮುಂತಾದ ಬಗೆಯ ಅಪ್ರಸನ್ನ ವ್ಯಕ್ತಿಗಳಿಗೆ ಅವರ ಅಶಿಷ್ಟತೆಗಾಗಿ ಕ್ಷಮಿಸಿ, ವ್ಯರ್ದವಾದ ಸಾಂಸಾರಿಕ ಜಗಳದಿಂದ ನಿನ್ನನ್ನು ಕಾಪಾಡಿಕೊಳ್ಳುತ್ತ ಅದ್ಯಾತ್ಮಿಕ ಉನ್ನತಿಯನ್ನು ಸಾದಿಸಬೇಕಾಗುವುದು ಭಾವೀ ಪ್ರಗತಿ ಮತ್ತು ಒಳ್ಳೆಯತನವನ್ನು ವಿಕಸಿತಗೊಳಿಸಲು ಅಡಿಗಡಿಗೂ ಈ ಕ್ಷಮಾದೇವಿಯ ಸಹಾಯಬೇಕು

ಭಕ್ತ -- (ಸಂತುಷ್ಟನಾಗಿ) ಹಾಗಾದರೆ ಕ್ಷಮಾ ದೇವಿಯವರೇ; ತಾವು ಅವಶ್ಯವಾಗಿ ನನ್ನ ಮಂದಿರದಲ್ಲಿ ನಿವಾಸಮಾಡಿರಿ (ಹೊರಗಿನ ಸಪ್ಪಳವನ್ನು ಕೇಳುತ್ತ) ಆದರೆ ಧರ್ಮರಾಜರೇ, ಕೋಮಲಳಾದ ಈ ಕ್ಷಮಾದೇವಿ ಎಲ್ಲಿ ಮತ್ತು ಒಳಗೆ ಬರಲು ಆತುರಪಡುತ್ತಿರುವ ಈ ಲೋಹ ಪುರುಷನೆಲ್ಲಿ! ಕುಸ್ತಿಗಡಿಯಂತೆ ಕಾಣುವ ಈ ಬಲಶಾಲಿ ವ್ಯಕ್ತಿಯಾರು?

ಧರ್ಮ - ಇವರ ಹೆಸರು "ದಮ" ಇವರೂ ಸದಾಕಾಲ ನನ್ನೊಂದಿಗೇ ಇರುತ್ತಾರೆ ಸಾಧನಾಮಾರ್ಗದಲ್ಲಿ ವಿಘ್ನಗಳನ್ನುಂಟುಮಾಡುವ ದುಷ್ಟರನ್ನು ಹತ್ತಿಕ್ಕಲು, ಹೆದರಿಸಲು ಪ್ರತಿಯೊಬ್ಬ ಭಕ್ತನಿಗೂ 'ದಮ' ದೇವತೆಯ ಅವಶ್ಯಕತೆಯುಂಟು

ಭಕ್ತ -- (ಜಿಜ್ಞಾಸೆಯಿಂದ) ಧರ್ಮದೇವಾ, ದಮದೇವತೆಯ ಸಹಾಯಕವಾಗುವದೆಂತು?

ಧರ್ಮ -- ಮನುಷ್ಯನಲ್ಲಿ ಕೆಲವು ಪಾಶವೀಯ ರಾಕ್ಷಸೀ ತತ್ವಗಳು ಮಲಗಿರುತವೆ ಕಾಮ, ಕ್ರೋಧ, ಲೋಭ, ಆವೇಶ, ಈರ್ಷ್ಯಾ, ದ್ವೇಷ, ಭಯ, ಮೈದುನ ಹಾಗೂ ಸ್ವಾರ್ದಮಂತಹ ಪಶುವಿಕಾರಗಳನ್ನು ತಡೆಯಲು ಮತ್ತು ಅವುಗಳನ್ನು ನಿಯಂತ್ರಿಸಲು ಹೆಜ್ಜೆ ಹೆಜ್ಜೆಗೂ ದಮದ ಅವಶ್ಯಕತೆಯುಂಟು ಶಕ್ತಿಶಾಲಿಯಾದ ವ್ಯಕ್ತಿಯೇ ಪಾಶವೀಯ ಮನೋವಿಕಾರಗಳನ್ನು ನಿಯಂತ್ರಿಸಬಲ್ಲನು ಆಹಾರ, ನಿದ್ರೆ, ಭಯ, ಮೈದುನ ಇವೆಲ್ಲ ನಿರ್ಬಲತೆಗಳು ಪಶುಗಳಲ್ಲಿ, ರಕ್ಕಸರಲ್ಲಿ ಮತ್ತು ಅವಿಕಸಿತ ಮಾನವರಲ್ಲಿ ಒಂದೇಯಾಗಿ ಸನ್ನಿಹಿತವಾಗುತ್ತದೆ ಈ ಹಾನಿಕಾರಕ ದುರ್ಬಲತೆಗಳನ್ನು ಮೆಟ್ಟುವ ದಮದೇವತೆ, ಸದಾ ನಮ್ಮೊಂದಿಗಿರುತ್ತಾರೆ ಇವರ ಸಹಾಯದಿಂದಲೇ ಕುತ್ಸಿತವಾದ ಚಿತ್ತವೃತ್ತಿಯ ಮೇಲೆ ಪೂರ್ಣ ನಿಯಂತ್ರಣವಿರಬಲ್ಲದು

ಭಕ್ತ -- ಹಾಗಾದರೆ ಇವರು ನನಗೆ ನಿಜವಾಗಿಯೂ ಅತ್ಯುಪಯುಕ್ತರಾದವರು ನನಗೂ ಒಮ್ಮೊಮ್ಮೆ ಕುತ್ಸಿತ ಮನೋವಿಕಾರಗಳನ್ನು ತಡೆಯುವ ಅವಶ್ಯಕತೆ ಇರುತ್ತದೆ ಬನ್ನಿರಿ, ದಮದೇವತೇ,ಪ್ರವೇಶಿಸಿ, ಕೃಪೆಮಾಡಿ ಒಳಗೆ ಪ್ರವೇಶಿಸಿ, ನನ್ನ ಮನಮಂದಿರವನ್ನು ಪವಿತ್ರಗೊಳಿಸಿ (ಹೊರಗೆ ಹೆಚ್ಚಾದ ಸಪ್ಪಳ ಕೇಳಿಸುತ್ತಿದ್ದ ಕಾರಣ ಮತ್ತೆ ಹೊರಗೆ ಇಣಕಿ) ಆದರೆ, ಇವರ ಹಿಂದೆಯೇ ಒಳನುಗ್ಗಲು ಯತ್ನಿಸುತ್ತಲಿರುವ ಈ ಮಹನೀಯರು ಯಾರು?

ಧರ್ಮ -- ಭಕ್ತನೇ, ಇವರನ್ನು ಗುರ್ತಿಸು ಇವರು "ಅಸ್ತೇಯ" ಇವರು ಗುಣಸ್ವಭಾವ ಮತ್ತು ಇವರ ಹೆಸರಿನ ಅರ್ಥತಿಳಿದಾಗ ನೀನೇ ಸ್ವತ ಇವರನ್ನು ಗುರ್ತಿಸುವಿ

ಭಕ್ತ -- ಮನ್ನಿಸಿ, ನನಗೆ ಇವರ ಹೆಸರಿನ ಅರ್ಥ ತಿಳಿಯುತ್ತಿಲ್ಲ

ಧರ್ಮ -- ಹಾಗಾದರೆ ಕೇಳು "ಅಸ್ತೇಯ"ವೆಂದರೆ ಕದಿಯದಿರುವುದು ಎಂದರ್ಥ ಜನರು ಕೇವಲ ಧನ, ಸಂಪತ್ತು, ವಸ್ತ್ರ, ಆಭೂಷಣ ಮುಂತಾದ ಬಹು ಬೆಲೆಯ ವಸ್ತುಗಳನ್ನಷ್ಟೇ ಕದಿಯುವುದಿಲ್ಲ, ಆದರೆ ತಮ್ಮ ದಿನನಿತ್ಯದ ಕಾರ್ಯವನ್ನು ಪೂರ್ತಿಸದೆ, ಮಾಡಬೇಕಾದ ಕಾರ್ಯವನ್ನು ಮಾಡದೇ ಕೆಲಸಗಳ್ಳರಾಗುತ್ತಾರೆ ಪ್ರತಿದಿನ ಮನೆಹೊರಗೆ ಕಚೇರಿಯಲ್ಲಿ, ಕಾರಖಾನೆಯಲ್ಲಿ, ಅಂಗಡಿಯಲ್ಲಿ ಅಥವಾ ಹೊಲದಲ್ಲಿ ಆಲಸಿಗಳಾಗಿ ಕೆಲಸಗಳ್ಳರಾಗುತ್ತಾರೆ ಧನ, ಶ್ರಮ, ಮತ್ತು ಸಮಯದ ಕಳವು ಪ್ರತಿದಿನ ಪ್ರತಿಕ್ಷಣವೂ ನಡೆಯುತ್ತಲೇ ಇರುತ್ತದೆ ಅವರು ಸ್ವತ ತಮಗೆ ತಾವೇ ಮೋಸಮಾಡಿಕೊಳ್ಳುತ್ತಾರೆ ತನಗೆ ತಾನೇ ಅಂಧಕಾರದಲ್ಲಿರುವುದು ಸಂಸಾರದಲ್ಲಿ ಎಲ್ಲಕ್ಕೂ ಸರಳಕಾರ್ಯವಾಗಿದೆ ಜನರು ಹಗಲಿರುಳೂ ಬೇರೆಯವರನ್ನು ಕಳ್ಳನೆನ್ನುತ್ತಾರೆ ಅವರ ನ್ಯೂನತೆಗಳನ್ನು ವಿಸ್ತಾರವಾಗಿ ಟೀಕಿಸುತ್ತಾರ, ಚುಚ್ಚಿ ಮಾತಾಡುತ್ತಾರೆ ಆದರೆ ನಾವೇ ಸ್ವತ ಮೋಸಕ್ಕೆ ಒಳಗಾಗಿದ್ದೇವೆಂಬುದನ್ನು ಅರಿಯುವುದಿಲ್ಲ ಪ್ರಾಯ, ಇಂತಹ ಕಾರ್ಯಕೆಟ್ಟದು ಇವನ್ನು ಮಾಡಬಾರದು ಎಂಬುದನ್ನು ವಿವೇಕ ತಿಳಿಸುತ್ತದೆ ಆದರ ಅಲ್ಪಸ್ವಲ್ಪ ತಪ್ಪು ಮಾಡುವುದರಲ್ಲಿ ತಪ್ಪೇನೂ ಇಲ್ಲ, ಯಾರು ನೋಡುತ್ತಾರೆ?

(ಪರಮಾತ್ಮನು ಪಾಪ ಪುಣ್ಯಗಳನ್ನು ಸದಾ ನೋಡುತ್ತಲಿರುವನೆಂಬುದನ್ನು ನೆನಪಿಡಿ)

ಓಂ ಯಸ್ಯ ಸೂರ್ಯಶ್ಚಕ್ಷು
ಶ್ಚಂದ್ರಮಾಶ್ಚ ಪುನರ್ಣವ
ಅಗ್ನಿಂ ಯಶ್ಚಕ್ರೇ ಆಸ್ಯಂ ತಸ್ಮೈ
ಜೇಷ್ಠಾಯ ಬ್ರಹ್ಮಣೇ ನಮ

ಋಗ್ವೇದ ೧೦/೭/೩೩

ಯಾವನು ಸೂರ್ಯ ಚಂದ್ರನನ್ನು ತನ್ನ ತೀಕ್ಷ್ಣ ಕಣ್ಣುಗಳನ್ನಾಗಿಯೂ, ಅಗ್ನಿಯನ್ನು ಮುಖವನ್ನಾಗಿಯೂ ಮಾಡಿಕೊಂಡಿದ್ದಾನೋ ಆ ಬ್ರಹ್ಮನನ್ನು ನಾವು ನಮಸ್ಕರಿಸುತ್ತೇವೆ ಅವನ ದೃಷ್ಟಿಯಿಂದ ಯಾರೂ ಉಳಿಯುವುದಿಲ್ಲ, ಎಂದು ಮನಸ್ಸಿಗೆ ಸತ್ಯದ ತರ್ಕವನ್ನು ಒಪ್ಪಿಸಿಕೊಳ್ಳುತ್ತಾರೆ ಕ್ಷಣಿಕ ಲೋಭ, ಮೋಹ, ಲಾಲಸೆ, ಪ್ರಕಟ್ಟಿಯಾದ ಸುಖ ಸಂತೋಷ, ಆಮೋದಪ್ರಮೋದ, ಕಷ್ಟಪಡದೇ ಹಣವನ್ನು ಹಾರಿಸುವುದು ಉದಾಹರಣೆಗೆ, ಲಂಚ, ಸಟ್ಟಾ, ಜಾಜು, ವರದಕ್ಷಿಣೆ ಮುಂತಾದವು, ಲೋಭ ದೃಷ್ಟಿ ಕಳ್ಳತನದ ಕುತ್ಸಿತಮಾರ್ಗದಲ್ಲಿ ಕೊಂಡೊಯ್ಯುವ ದುಷ್ಟಮನೋವಿಕಾರಗಳು ಅಸ್ತೇಯ ದೇವತೆಯು ಈ ಎಲ್ಲ ಪಾಪಗಳಿಂದ ಸುರಕ್ಷಿತಗೊಳಿಸುತ್ತಾರೆ

ಭಕ್ತ -- (ಶಾಂತಭಾವದಿಂದ) ಅಂದಮೇಲೆ ಅಸ್ತೇಯ ದೇವತೆಯೂ ಕೂಡಾ ನನ್ನ ಸಾಧನೆಯ ಪಥದಲ್ಲಿ ತುಂಬಾ ಸಹಾಯಕರಾಗಿರುತ್ತಾರೆ ಕದಿಯುವ ಪ್ರವೃತ್ತಿಯೇ ಎಲ್ಲ ಪಾಪಗಳ ಮೂಲ ಬನ್ನಿರಿ, ತಾವೂ ಒಳಗೆ ಪ್ರವೇಶಿಸಿ, ತಮ್ಮ ಹಿಂದಿರುವ ಈ ಶ್ರೇಷ್ಠಮಹಿಳೆಯಾರು?

ಧರ್ಮ -- ಈ ಮಹಿಳೆಯೂ ನನಗೆ ಸಹಾಯಕಳೂ, ಸಹಯೋಗಿನಿಯೂ ಆಗಿದ್ದಾಳೆ ಇವಳು ಇದ್ದಲ್ಲಿಯೇ ನಾನು ನಿಲ್ಲುತ್ತೇನೆ ಇವಳಿಲ್ಲದೇ ನನ್ನ ಇರುವು ಅಸಂಭವ

ಭಕ್ತ -- (ಜಿಜ್ಞಾಸಾಭಾವದಿಂದ) ಇವರ ಹಸರು ಮತ್ತು ಪರಿಚಯ?

ದರ್ಮ - ಇವಳ ಹೊರರೂಪದಿಂದಲೇ ಇವಳನ್ನು ಅರಿತುಕೊ ಇವಳ ಕಣಕಣದಲ್ಲಿಯೂ ಸ್ವಚ್ಛತೆ ಇದೆ ಶುಚಿತ್ವವಿದೆ ಇವಳು 'ಶುಚಿ' ದೇವಿ ಯೋಚಿಸು ಸ್ವಚ್ಛತೆ, ಶುಚಿತ್ವವಿಲ್ಲದೆ ದರ್ಮ ಹೇಗೆ ತಾನೇ ನಿಲ್ಲಬಲ್ಲದು? ದರ್ಮ ಸಾದಕನಿಗೆ ಬಹಿಶ್ಶುದ್ಧಿಯ ಜೊತೆಗೆ ಅಂತ ಶುದ್ಧಿಯೂ ಬೇಕಾಗುತ್ತದೆ ಸ್ನಾನದಲ್ಲಿಯೂ ಪೂರ್ಣ ಶುಚಿತ್ವದ ಅವಶ್ಯಕತೆಯುಂಟು

ಭಕ್ತ -- (ಸಂತೋಷವನ್ನು ವ್ಯಕ್ತಪಡಿಸುತ್ತ) ಹಾಗಾದರೆ ಇವರು ನನಗೆ ತುಂಬಾ ಉಪಯುಕ್ತ ದೇವತೆ, ಇವರನ್ನು ಒಳಗೆ ಬಿಡಿ (ಸ್ವಲ್ಪ ತಡೆದು) ಮತ್ತೇ ಇವಳ ಹಿಂದೆ ಒಳಬರಲು ಬಯಸುತ್ತಿರುವ ದೇವತೆಯಾರು?

ದರ್ಮ - ಇವರು "ಸಂಯಮ" ದೇವತೆ ಮನುಷ್ಯನಿಗೆ ತನ್ನ ಬೋಜನ, ವಾಸನಾತೃಪ್ತಿ, ಇಂದ್ರಿಯ ಸುಖ ಸಾಧನಗಳು, ಪಾಶವೀಯ ಪ್ರವೃತ್ತಿಗಳು ಮತ್ತು ಕೆಟ್ಟ ಬಯಕೆಗಳ ಮೇಲೆ ಸಂಯಮವಿಡಬೇಕು ಎಂದು ಹೇಳಲಾಗುತ್ತದೆ ಕೀಳು ತರವಾದ ಪಾಶವೀಯ ಸುಖಗಳ ಹಿಂದೆ ದಾವಿಸುವವನು, ಮೃಗತೃಷ್ಣೆಗೆ ಸಿಲುಕಿದಂತೆಯೇ ಸರಿ ನನ್ನ ಭಕ್ತನೇ, ಯಾವ ಮನುಷ್ಯನು ಕ್ಷುದ್ರವಾದ, ಕ್ಷಣಿಕವಾದ ವಿಷಯವಾಸನಾ ತೃಪ್ತಿಗಾಗಿ ಹಿಂದುಮುಂದು ನೋಡದೇ ಮನಬಂದಂತೆ ಅದರಲ್ಲಿ ಮುಳುಗುತ್ತಾನೆಯೋ ಅಂದವನು ಶಾರೀರಿಕ ಮತ್ತು ಮಾನಸಿಕ ರೋಗ ವಿಕಾರಗಳ ಕಟುವಾದ ನೋವನ್ನು ಅನುಭವಿಸುತ್ತಾನೆ "ಸಂಯಮ" ದೇವತೆ ನನ್ನ ಆತ್ಮೀಯ ಮಿತ್ರ ಇವರ ವಿನ ನಾನು ನನ್ನ ಶರೀರವನ್ನು ಅಪೂರ್ಣವೆಂದೇ ತಿಳಿಯುತ್ತೇನೆ ಇವರು ನನ್ನೊಂದಿಗಿರಬೇಕಾದುದು ಅನಿವಾರ್ಯ

ಭಕ್ತ - (ಸಂತುಷ್ಟನಾಗಿ) ಆಹಾ! ಇವರು ನನ್ನ ಜೀವನದ ಜೀವಾಳ, ನನ್ನ ಬಾಳಿಗಾಗಿ ಅತ್ಯಂತ ಉಪಯುಕ್ತರು ಮಹಾತ್ಮರೇ, ತಾವೂ ದಯಮಾಡಿಸಿ ನನ್ನ ಮನಮಂದಿರದಲ್ಲಿ ಸದಾ ನೆಲೆಗೊಳ್ಳಿ, (ಮತ್ತೆ ಸೋಜಿಗಗೊಂಡು) ಹಿಂದೆ ಬರುತ್ತಿರುವ ಈ ದೇವಿಯರು ಯಾರು?

ದರ್ಮ --(ತಿಳಿಸುತ್ತ) ಮೊದಲಿನ ದೇವಿ "ಬುದ್ಧಿ" ಎರಡನೆಯವಳು "ವಿದ್ಯಾ" ದೇವಿ ಇವರು ನನ್ನ ಶರೀರದ ಅಭಿನ್ನ ಅಂಗರಾಗಿದ್ದಾರೆ ಬುದ್ಧಿಯ ಪರಿಪಕ್ವತೆ ಮತ್ತು ಆಳವಾದ ಜ್ಞಾನವನ್ನು ಇವಳಲ್ಲದೇ, ನಿಜವಾದ ರೂಪದಲ್ಲಿ ಯಾರು ತಾನೇ ನಿನಗೆ ತಿಳಿಸಬಲ್ಲರು? ದರ್ಮ ಸಾದನೆಯನ್ನು ಮಾಡುವವನ ಬುದ್ಧಿ ಹಾಗೂ ವಿದ್ಯೆಗಳು ಸ್ವಾದ್ಯಾಯ ದ್ವಾರಾ ನಿರಂತರವಾಗಿ ಪ್ರತಿದಿನವೂ ಹೆಚ್ಚುತ್ತಿರಬೇಕು ವಿದೇಶದಲ್ಲಿ ಅಂದರೆ ಪರಸ್ಥಳದಲ್ಲಿದ್ದಾಗ ವಿದ್ಯೆಯು ಸನಿತ್ರನಂತೆ ಸಹಾಯ ಮಾಡುತ್ತದೆ ಇದಕ್ಕೆ ಭಾಷೆಯ ಕಟ್ಟುಪಟನವಿಲ್ಲ ಕೆಂಪಾಗಿದ್ದರೂ ಸುಗಂದವಿಲ್ಲದ ಕುಸುಮವನ್ನು ಯಾರೂ ಬಯಸುವುದಿಲ್ಲ ಅದರಂತೆ ರೂಪ, ಯವ್ವನ, ಯುಕ್ತನಾದ ಮತ್ತು ಉಚ್ಚಕುಲದಲ್ಲಿ ಉತ್ಪನ್ನನಾದ ಪುರುಷನೂ, ಸ್ತ್ರೀಯೂ ವಿದ್ಯಾ ವಿಹೀನವಾಗಿದ್ದರೆ ಅವರಿಗೆ ಎಲ್ಲಿಯೂ ಆದರ ದೊರೆಯದು

ಭಕ್ತ -- 'ವಿದ್ಯೆ' ಯಾರಿಗೆ ದೊರೆಯದು ಎಂಬ ಮಾತನ್ನು ಸ್ಪಷ್ಟಪಡಿಸಿ ದೇವಾ

ದರ್ಮ -- ಸುಖೇಚ್ಛು, ವಿಲಾಸಿ, ಆಲಸಿ ಮತ್ತು ಚಿಕ್ಕಪುಟ್ಟ ಕ್ಷುದ್ರವಾದ ವಸ್ತುಗಳಲ್ಲಿ ಸುಖವನ್ನು ಹುಡುಕುವ ವ್ಯಕ್ತಿಗೆ ವಿದ್ಯಾಪ್ರಾಪ್ತಿಯಾಗುವುದಿಲ್ಲ ಮನೋರಂಜನೆಯ ಮಾತುಗಳ ತಂಗಳ ಅಂಗಳದಲ್ಲೆ ತೇಲಾಡುವ ಚಂಚಲ ಬುದ್ಧಿಯ ವ್ಯಕ್ತಿಗೆ ಬುದ್ಧಿದೊರೆಯುವುದಿಲ್ಲ ಸುಖಾರ್ದಿಯು ವಿದ್ಯೆಯನ್ನು ಮತ್ತು ವಿದ್ಯಾರ್ದಿಯು ವಿರಾಮವನ್ನು ಬಯಸಬಾರದು ವಿದ್ಯೆಯು ಸತತ ಪರಿಶ್ರಮ, ಚಿಂತನ, ಅಭಿರುಚಿ, ಸತತ ಪ್ರಯತ್ನ ಏಕಾಗ್ರತೆಯನ್ನು ಬಯಸುತ್ತದೆ ವಿದ್ಯಾರ್ದಿಯ ವಿವೇಕ ಶಕ್ತಿ, ವಿವೇಚನಾಶಕ್ತಿ, ತಿಳಿವು ಮತ್ತು ಯೋಗ್ಯತೆಗಳು ಪ್ರತಿದಿನವೂ ಹೆಚ್ಚುತ್ತಲೇ ಇರಬೇಕು

ಭಕ್ತ -- (ಅನುನಯಯುಕ್ತ ಸ್ವರದಲ್ಲಿ) ಹೇ, ವಿದ್ಯಾದೇವಿಯೇ, ನಿನ್ನ ಬಳಿ ಜ್ಞಾನ- ವಿಜ್ಞಾನದ ಅಕ್ಷಯ ಕೋಶವಿದೆ ಅದು ವ್ಯಯದಿಂದ ಅದಿಕವಾಗುತ್ತದೆ, ಕೂಡಿಡುವುದರಿಂದ ಕಡಿಮೆಯಾಗುತ್ತದೆ ನನಗೆ ನಿನ್ನ ಜ್ಞಾನ--ವಿಜ್ಞಾನ, ಬುದ್ಧಿ-- ವಿವೇಕ, ಏಕಾಗ್ರತೆ, ಸಂಯಮ, ತಿಳುವಳಿಕೆ, ಉಚಿತ--ಅನುಚಿತಗಳ ಪರಿಜ್ಞಾನವನ್ನು ಕೊಡು ವಿದ್ವಾನ್, ವಿವೇಕಿಯನ್ನಾಗಿಮಾಡು

ಧರ್ಮ -- ಭಕ್ತನೇ, ಕೇಯೂರ, ಮತ್ತು ಚಂದ್ರಹಾರದಿಂದ ಮಾನವನ ಶೋಭೆ ಹೆಚ್ಚದು ಸುಗಂದ ದ್ರವ್ಯ ಲೇಪನಗಳಿಂದ ಸ್ನಾನ, ಹೂಗಳ ಅಲಂಕಾರ, ಅದವಾ ಸುಂದರವಾಗಿ ನೀಟಾಗಿ ತಿದ್ದಿ--ತೀಡಿದ ಕೇಶಾಲಂಕಾರದಿಂದಲೂ ಮನುಷ್ಯನಿಗೆ ನಿಜವಾದ ಆದರ ದೊರೆಯುವುದಿಲ್ಲ ಸುಸಂಸ್ಕೃತ ಮತ್ತು ಪರಿಶುದ್ಧವಾದ ವಾಣಿ, ತಿಳುವಳಿಕೆ ಮತ್ತು ಜ್ಞಾನವೇ ಮನುಷ್ಯನ ಶೋಭೆಯನ್ನು ಹೆಚ್ಚಿಸುವ ಅಮೂಲ್ಯವಾದ ಮಣಿಗಳು ಇವೇ ಮಾನವೀಯ ಮೌಲ್ಯ ಅನ್ಯ ಭೂಷಣಗಳು ನಷ್ಟವಾಗುತ್ತವೆ ಆದರೆ ವಾಣಿ ಮತು ಬುದಿಯ ದಿವ್ಯ ಭೂಷಣಗಳು ಸ್ಥಿರವಾ

ತ್ತವೆ ವಿದ್ಯೆಯೇ ಮನುಷ್ಯನ ವಾಸ್ತವವಾದ ಮತ್ತು ಸ್ಥಿರವಾದ ರೂಪ ಎಂಬುದು ತ್ರಿಕಾಲಕ್ಕೂ ಸತ್ಯ ವಿದ್ಯೆಯೇ ಮನುಷ್ಯನ ಅತ್ಯಂತ ಸುರಕ್ಷಿತವಾದ ಸಂಪತ್ತು ವಿದ್ಯೆಯಿಂದಲೇ ಸಕಲ ಪವಿತ್ರವಾದ ಭೋಗಗಳನ್ನು ಭೋಗಿಸಬಹುದಾಗಿದೆ ವಿದ್ಯೆಯು ಯಶಸ್ಸು ಮತ್ತು ಪ್ರತಿಷ್ಠೆ, ನೇತೃತ್ವ ಮತ್ತು ಆದರವನ್ನು ನೀಡುವ ತಾಯಿ ವಿದ್ಯೆಯಿಂದಲೇ ಬುದ್ಧಿ, ವಿವೇಕ, ಸ್ಮೃತಿ, ಜ್ಞಾನ ಆತ್ಮಾದಿಗಳು ಪ್ರಖರಗೊಳ್ಳುವೆ ಕಾರಣ ವಿದ್ಯಾ- ಬುದ್ಧಿಯ ವಿನ ನನ್ನ ಅಸ್ತಿತ್ವವೇ ಇಲ್ಲ

ಭಕ್ತ -- ಅಂದರೆ ತಾವಿಬ್ಬರು ದೇವಿಯರೂ ನನಗಾಗಿ ತುಂಬಾ ಉಪಯುಕ್ತರಾಗಿದ್ದೀರಿ ತಾಯಂದಿರೇ, ನನ್ನ ಹೃನ್ಮಂದಿರದಲ್ಲಿ ದಯಮಾಡಿಸಿ, ನನ್ನನ್ನು ಜ್ಞಾನಾಗ್ನಿಯಿಂದ ಪವಿತ್ರಗೊಳಿಸಿ (ಮತ್ತೆ ತುಸು ಆಶ್ಚರ್ಯದಿಂದ) ಆದರೆ ಮತ್ತೆ ಒಳಗೆ ಬರಲು ಹವಣಿಸುತ್ತಲಿರುವ ಈ ದೇವತೆಗಳು ಯಾರು?

ದರ್ಮ -- ಇವರಿಬ್ಬರು 'ಸತ್ಯ' ಮತ್ತು 'ಅಕ್ರೋದ' ಎಂಬ ದೇವತೆಗಳು ನಾನಿದ್ದಲ್ಲಿ ಇವರಿಬ್ಬರೂ ನನ್ನ ನೆರಳಿನಂತೆ ಜೊತೆಯಾಗಿರುತ್ತಾರೆ

ಭಕ್ತ -- ನನಗೆ ತಮ್ಮ ಮಾತು ತಿಳಿಯಲಿಲ್ಲ

ದರ್ಮ -- ಹಾಗಾದರೆ ಕೇಳು, ಇದನ್ನೂ ತಿಳಿದುಕೋ ಈ ಸತ್ಯದೇವನು ನನ್ನ ಅತ್ಯಂತಮಿತ್ರ, ಸಹಯೋಗಿಯಾಗಿದ್ದಾನೆ ಇವನು ವಿವೇಕಮಾರ್ಗದಲ್ಲಿಯ ಕಂಟಕಕಾರಿಯಾದ ಮುಳ್ಳುಗಳನ್ನು ಸರಿಸಿ ಹೂವುಗಳನ್ನು ಹರಹುವ ದೇವತೆ ಅಸತ್ಯವು ಅಸತ್ಯವೇ ಅದರಿಂದ ಸದಾ ಜಾಗ್ರತೆಯಾಗಿರುವಂತೆ ಹೇಳುತ್ತಾನೆ ಅಸತ್ಯವು ಒಂದಿಲ್ಲೊಂದು ದಿನ ಬಯಲಾಗುತ್ತದೆ ಅಸತ್ಯವು ಹೊರಗಿನಿಂದ ಸುಂದರವೂ, ಮನೋಹರವೂ ಆಗಿರುತ್ತದೆ, ಆದರದು ಕ್ಷಣಿಕ ಸತ್ಯದ ದಾರಿಯಲ್ಲಿ ಬರುವ ಕಲ್ಲು ಮುಳ್ಳುಗಳನ್ನು ನೋಡು ನಿರಾಶವಾಗಬಾರದು ಸತ್ಯದ ಮಾರ್ಗವು ತುಂಬಾ ಕಠಿಣವಾದದ್ದೆಂಬ ಮಾತೇನೋ ನಿಜ ಆದರದು ಸಹಜ, ಸ್ವಾಭಾವಿಕ ಮತ್ತು ದೀರ್ಘಕಾಲಿಕ ಲಾಭವನ್ನುಂಟುಮಾಡುತ್ತದೆ ಅಸತ್ಯತೆಯನ್ನು ಎಷ್ಟು ಚತುರತೆಯಿಂದ, ಜಾಣ್ಮೆಯಿಂದ ಮಾಡಿದರೂ ಸರಿ ಕೊನೆಗೊಂದು ದಿನ ಅದು ಬೆಳಕಿಗೆ ಬರುತ್ತದೆ ಕೃತ್ರಿಮತೆಯು ಬಹು ದಿನಗಳವರೆಗೆ ನಿಲ್ಲಬಲ್ಲದೇ? ದುರಾಶೆ ಮತ್ತು ಮೋಸದಿಂದ ಪರಿಪೂರ್ಣವಾದ ಕೃತ್ರಿಮ ನಡೆ ನುಡಿಗಳು ಎಷ್ಟು ದಿನತಾನೇ ನಿಲ್ಲುತ್ತವೆ? ಥಳಥಳಿಸುವ, ಆಡಂಬರದ ವೇಷ ಭೂಷ, ಅಭಿಮಾನವನ್ನು ಕೊಚ್ಚಿಕೊಳ್ಳುವುದು, ಅಸತ್ಯಪ್ರತಿಜ್ಞೆ, ಸಾಲಮಾಡುವುದು, ಅಸತ್ಯ ಆಚಾರವ್ಯವಹಾರ, ವಂಚನೆ, ಔಪಚಾರಿಕತೆ ಹಾಗೂ ಮೋಸದ ಎಲ್ಲ ರೂಪಗಳೂ ಒಂದಿಲ್ಲೊಂದು ದಿನ ಅವಶ್ಯವಾಗಿ ಬಯಲಾಗುತ್ತವೆ ಮತ್ತು ಅದರಿಂದ ಅಪ್ರತಿಷ್ಠೆ, ಅಪಮಾನ, ದಂಡನೆಗೆ ಕಾರಣವಾಗುತ್ತದೆ ಈ ಸತ್ಯದೇವನ ಮಹಿಮೆಯನ್ನು ಏನೆಂದು ಹೇಳಲಿ? ಪೂರ್ಣ ವಿಷಯವನ್ನು ಇವರೇ ತಿಳಿಸಬಲ್ಲರು (ಸತ್ಯದೇವನನ್ನು ಕುರಿತು) ತಾವೇ ಸ್ವತ ತಮ್ಮ ಪರಿಚಯವನ್ನು ನೀಡುವ ಕೃಪೆಮಾಡಬೇಕು

ಸತ್ಯ -- ಭಕ್ತನೇ, ಭಗವಾನ್, ದರ್ಮರಾಜರು ಸರಿಯಾಗಿಯೇ ಹೇಳಿದ್ದಾರೆ ನಾನೊಂದು ಚಿಕ್ಕ ಬೀಜದ ಸಮಾನನಾಗಿದ್ದೇನೆ ಬೀಜವು ಇಂದು ಅಪ್ರಿಯ, ಕಠೋರ, ಶುಷ್ಕ ಮತ್ತು ಕೆಲಸಕ್ಕೆ ಬಾರದಂತೆ ಕಾಣುತ್ತಿರುವುದೇನೋ ನಿಜ ಆದರೆ ಇದೇ ಚಿಕ್ಕದಾದ ಬೀಜವು ಒಂದು ದಿನ ಅಂಕುರಿತವಾಗಿ ಬೆಳೆದು, ಬಲಿತು ಮಹಾವಟವೃಕ್ಷ ಕಲ್ಪತರುವಾಗುತ್ತದೆ ಉಚ್ಚತಮ ಹಾಗೂ ಪ್ರತಿಷ್ಠಿತ ಜೀವನವನ್ನು ನಡೆಸಲು ನಿನಗೆ ನನ್ನ ಸತ್ಸಂಗದಲ್ಲಿದ್ದು ಶುದ್ಧವಾದ ಆಚಾರ ವ್ಯವಹಾರವನ್ನು ನಡೆಸಬೇಕಾಗುವುದು

ಭಕ್ತನ ಮುಖಮಂಡಲದಲ್ಲಿ ಅಸತ್ಯವು ದೂರಾಗಿ ಸತ್ಯದ ಪ್ರಖರವಾದ ತೇಜಸ್ಸು ಉದ್ದೀಪನಗೊಂಡಿತು

ಭಕ್ತ - (ಆನಂದಿತನಾಗಿ) ಆಹಾ! ನನ್ನ ಬಾಳಿನಲ್ಲಿಂದು ನವಪ್ರಭಾತವಾದಂತೆ ಭಾಸವಾಗುತ್ತಿದೆ ಬನ್ನಿ ಸತ್ಯದೇವಾ, ನನ್ನ ಮನಸ್ಸಿನ ದೇಗುಲದಲ್ಲಿ ಸದಾವಿರಾಜಮಾನರಾಗಿರಿ ಸುಳ್ಳು, ಮೋಸ, ಹಟ, ವಂಚನೆಗಳೆಂಬ ವಿಷಪೂರಿತ ಅಂದಕಾರವನ್ನು ದೂರಮಾಡಿರಿ (ಅಕ್ರೋಧದ ಕಡೆಗೆ ತೋರಿಸುತ್ತ) ಭಗವನ್, ಈ ದೇವತೆಯ ಪರಿಚಯನೀಡಿರಿ

ಧರ್ಮ -- ಭಕ್ತನೇ ಇವರು 'ಅಕ್ರೋದ'ರು ಎಂದು ಆಗಲೇ ಹೇಳಿದೆನಲ್ಲವೇ? ಇವರು ಮನಸ್ಸಿನಲ್ಲಿ ಶಾಂತಿ, ಧೈರ್ಯ, ಸಹಿಷ್ಣುತೆ, ಕೋಮಲತೆ ಮತ್ತು ಕ್ಷಮಾ ಮುಂತಾದ ದಿವ್ಯ ಗುಣಗಳನ್ನು ಕೊಡುತ್ತಾರೆ ಇವರು ಮಾನವನ ಪಾಶವೀಯ ವಾಸನೆಗಳನ್ನೂ ಹಾಗೂ ದುಷ್ಪವೃತ್ತಿಗಳನ್ನು ದೂರ ಮಾಡುವ ದಯಾಮಯದೇವತೆ ಉತ್ತೇಜನೆ, ಅಪ್ರಸನ್ನತೆ, ಪ್ರತೀಕಾರ, ವಿಷಯವಾಸನಾ ಉದ್ವೇಗಗಳು, ಮನುಷ್ಯನನ್ನು ಮತ್ತನನ್ನಾಗಿ ಮಾಡುತ್ತವೆ ಮಾನವನು ಕೋಪದಲ್ಲಿ ವಿವೇಕಶೂನ್ಯನಾಗಿ, ಭವಿಷ್ಯದ ಪರಿಣಾಮದತ್ತ ಗಮನ ಕೊಡದೇ ಹಿಂಸೆ, ಅಪಮಾನ, ಕೊಲೆ ಮುಂತಾದ ಅಪರಾಧಗಳನ್ನು ಮಾಡುತ್ತಾನೆ ಕೋಪದಲ್ಲಿ ಸಾಕ್ಷಾತ್ ರಕ್ಷಸನಾಗುತ್ತಾನ ಅಕ್ರೋದದ ಜೊತಗಿದ್ದ ನೀನು ನನ್ನ ಶಕ್ತಿಗಳನ್ನು ಉತ್ತಮಗೊಳಿಸಿಕೊಳ್ಳಬಲ್ಲ ದರ್ಮವಿದ್ದಲ್ಲಿ ಅಕ್ರೋದದ ಅಸ್ತಿತ್ವ ತುಂಬಾ ಅವಶ್ಯಕ ಎಂಬುವನ್ನು ಚೆನ್ನಾಗಿ ಅರ್ಥಮಾಡಿಕೊ ನಾವಿಬ್ಬರೂ ಅಭಿನ್ನ

ಭಕ್ತ - (ಮನತುಂಬಿ ತನು ಉಬ್ಬಿ) ಓತ್ತೆಗಳಾದ ಇಷ್ಟೊಂದು ಜನ ಉಪಯುಕ್ತರಾದ ದೇವಿ, ದೇವತಗಳು ನನ್ನ ಸಹಾಯಕ್ಕಾಗಿ ಒಂದುಗೂಡಿ ನನ್ನ ಮನಮಂದಿರದಲ್ಲಿ ಆಗಮಿಸಿ ಸ್ನೇಹಿತರಾಗಿದ್ದಾರೆ ನಾನೆಂತಹ ಭಾಗ್ಯಶಾಲಿ, ನಾನಿಂದು "ದರ್ಮ"ದ ಸಂಪೂರ್ಣ ಸ್ವರೂಪ ದರ್ಶನವನ್ನು ಹೊಂದಿದೆನು ದನ್ಯೋಸ್ಮಿ ದನ್ಯೋಸ್ಮಿ

ಒಮ್ಮಿಂದೊಮ್ಮೆಲೆ ಸ್ವಪ್ನವು ಸರಿಯುತ್ತದೆ ಜಾಗ್ರತನಾಗುತ್ತಾನೆ ಕಣ್ಣುಗಳನ್ನು ಉಜ್ಜಿಕೊಳ್ಳುತ್ತ ಸ್ವಪ್ನದಲ್ಲಿ ಕಂಡ ಆಪ್ತರ ವಿಷಯವನ್ನು ಮೆಲಕು ಹಾಕುತ್ತಾನೆ

ಆಹಾ! ಇದೆಲ್ಲ ಏನಿತ್ತು? ನಾನು ಏನು ನೋಡುತ್ತಲಿದ್ದೆ ಧರ್ಮದ ಜೊತೆಗಾರರು ಎಲ್ಲಿ ಅದೃಶ್ಯರಾದರು? ಅವರು ನನ್ನೀ ಚರ್ಮಚಕ್ಷುವಿಗೆ ಏಕೆ ಕಾಣಿಸುತ್ತಲಿಲ್ಲ? (ತುಸು ಯೋಚಿಸಿ) "ಧರ್ಮ"ದ ಸ್ವರೂಪವು ಅತ್ಯಂತ ವ್ಯಾಪಕವಾಗಿದೆಯೆಂಬುದನ್ನು ನಾನೀಗ ತಿಳಿದೆ ದರ್ಮದ ಸ್ವರೂಪ ಚಿಂತನೆಯನ್ನು ಮಾಡಿದಷ್ಟೂ ಅದರ ನಿಜವಾದ, ಆಳವಾದ, ವ್ಯಾಪಕವಾದ ಮತ್ತು ಸುದೀರ್ಘವಾದ ಅರ್ಥವಾಗುತ್ತದೆ ಅದನ್ನು ನಾವಿಂದು ಸಂಕುಚಿತಗೊಳಿಸಿ ವಂಚಿತರಾಗಿದ್ದೇವೆ

ಧರ್ಮವು ಮಾನವನ ದೈನಿಕ ಜೀವನದಲ್ಲಿ ಪ್ರತಿದಿನ ಕೆಲಸಕ್ಕೆ ಬರುವ ಉಪಯುಕ್ತವಾದ, ವ್ಯಾವಹಾರಿಕ ತತ್ವ, ಧರ್ಮವಿಲ್ಲದೇ ಯಾವ ಕ್ಷೇತ್ರದಲ್ಲಿಯೂ ಸಫಲತೆಯು ದೊರೆಯದು ಪ್ರತಿಯೊಂದು ಚಿಕ್ಕ ದೊಡ್ಡ ಯೋಜನೆಯ ಸಿದ್ಧಿಯ ಮೂಲವೇ ಧರ್ಮ ಆದರೆ ನಿತ್ಯ ಬಾಳಿನಲ್ಲಿ ಮತ್ತು ವ್ಯವಹಾರದಲ್ಲಿ ಅದರ ನಿರ್ವಹಣೆಯು ತುಂಬಾ ಕಠಿಣ ನಿಜವಾದ ದರ್ಮಾಚರಣೆಯು ಪರಮಾತ್ಮನ ಸಾಕ್ಷಾತ್ಕಾರಕ್ಕೆ ಹೆದ್ದಾರಿ ನಾನೀಗ ಅದರಂತೆ ಜೀವನವನ್ನು ಸಾಗಿಸಲು ಪ್ರಯತ್ನಿಸುತ್ತೇನೆ ಒಳಗಿನವನು ಸದಾ ನನ್ನ ಸಹಾಯಕನಾಗಿರಲೆಂದು ಪ್ರಾರ್ಥಿಸುತ್ತೇನೆ - ಎಂದು ಭಕ್ತನು ಚಿಂತನೆಯಲ್ಲಿ ತನ್ಮಯನಾಗುತ್ತಾನೆ

— ಸೀಮೋಹಮ್



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಬರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಸಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯ್ನು ರೂಪಿಸಲಾಗಿದೆ ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಬಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ

ಈ ಯೋಜನೆಯ ಹಲವು ವೈಶಿಷ್ಟಗಳು ಹೀಗಿವೆ --

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾದಿಕಾರಿ ತಿ ತಿ ದೇ ತಿರುಪತಿ ಇವರಿಗೆ 1 ಲಕ್ಷ ರೂಗಳ ಬಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ 3 ಲಕ್ಷ ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುಲವುದು ಎಂದರೆ ಶುಕ್ರವಾರಗಳ ಹೊರತು ಸುಪ್ರಬಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ, (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು ಒಂದು ಬಾರಿಗೆ 10 ಶತಾಂಶ ದಂತೆ, ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ ತಿ ದೇ ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ ಆಗ ಸೇವೆಗಳನ್ನು ಇಬ್ಬರು ಅದವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ

**ಕಾರ್ಯನಿರ್ವಹಣಾಧಿಕಾರಿ,**

ತಿ ತಿ ದೇ , ತಿರುಪತಿ



# ವಾರ್ತಾಲಹರಿ



### ತಿರುಮಲೆಯಲ್ಲಿ ಬಾರತದ ರಾಷ್ಟ್ರಪತಿ

ಭಾರತದ ಒಂಬತ್ತನೆಯ ರಾಷ್ಟ್ರಪತಿ ಡಾ ಶಂಕರದಯಾಳ ಶರ್ಮ ಅವರು ತಮ್ಮ ಸಹದರ್ಮಿಣಿ ಶ್ರೀಮತಿ ವಿಮಲಾ ಶರ್ಮ ಅವರೊಡನೆ ಜುಲೈ 27 ರಂದು ಸೋಮವಾರ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾದಿಸಿದರು ಶನಿವಾರ ಜುಲೈ 25 ರಂದು ರಾಷ್ಟ್ರಪತಿ ಪದವಿಯ ಪ್ರಮಾಣವಚನವನ್ನು ಸ್ವೀಕರಿಸಿದ ಅವರು ತದನಂತರ ಮೊದಲಬಾರಿ ತಿರುಮಲೆಗೆ ಸಕುಟುಂಬರಾಗಿ ಆಗಮಿಸಿದ್ದರು

ಸೋಮವಾರ ಸಂಜೆ ತಿರುಮಲೆಗೆ ಆಗಮಿಸಿದ ರಾಷ್ಟ್ರಪತಿಗಳು ಮೊದಲಿಗೆ ಶ್ರೀ ವರಾಹ ಸ್ವಾಮಿ ದೇವಾಲಯವನ್ನು ಸಂದರ್ಶಿಸಿದ ನಂತರ ಶ್ರೀ ವೆಂಕಟೇಶ್ವರ ಆಲಯಕ್ಕೆ ಆಗಮಿಸಿ, ಸ್ವಾಮಿ ಪೂಜೆಯನ್ನು ನೆರವೇರಿಸಿದರು ಆಲಯದ ಪುರೋಹಿತರು ಸ್ವಾಮಿಯ ವೈಭವವನ್ನು ಕುರಿತು ವಿವರಿಸಿದರು

ಸ್ವಾಮಿ ದೇವಾಲಯದ ಮಹಾದ್ವಾರದ ಬಳಿ ಮಂಗಳ ವಾದ್ಯ ವೇದಮಂತ್ರಗಳೊಡನೆ ರಾಷ್ಟ್ರಪತಿಗಳಿಗೆ ಇಸ್ತಿಕಪಾಲ ಸ್ವಾಗತವನ್ನು ನೀಡಲಾಯಿತು ರಾಷ್ಟ್ರಪತಿಗಳ ಜೊತೆಯಲ್ಲಿ ಆಂಧ್ರಪ್ರದೇಶದ ರಾಜ್ಯಪಾಲರು ಶ್ರೀ ಕೃಷ್ಣಕಾಂತ್, ಮುಖ್ಯಮಂತ್ರಿ ಶ್ರೀ ಎನ್ ಜನಾರ್ದನರೆಡ್ಡಿ, ತಿ ತಿ ದೇ ಅದ್ಯಕ್ಷರು ಶ್ರೀ ಟಿ ಸುಬ್ಬರಾಮಿರೆಡ್ಡಿ, ಕಾರ್ಯನಿರ್ವಹಣಾದಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್, ಸಂಯುಕ್ತ ಕಾರ್ಯನಿರ್ವಹಣಾದಿಕಾರಿ ಶ್ರೀ ಜನಾರ್ದನ ನಾಯುಡು, ತಿ ತಿ ದೇ ಧರ್ಮಕರ್ತರ ಮಂಡಳಿಯ ಸದಸ್ಯರು ಶ್ರೀ ಟಿ ಎಲ್ ರವೀಂದ್ರರೆಡ್ಡಿ, ಶ್ರೀಮತಿ ದಾಸರಿ ಪದ್ಮ ಆಂದ್ರಪ್ರದೇಶದ ಮಂತ್ರಿಗಳು ಶ್ರೀ ಆರ್ ಚೆಂಗಾರೆಡ್ಡಿ, ಶ್ರೀಮತಿ ಕುತೂಹಲಮ್ಮ ಮೊದಲಾದ ಅಧಿಕಾರಿ ಹಿರಿಯರು ಇದ್ದರು

ಸ್ವಾಮಿ ದರ್ಶನದ ನಂತರ ರಂಗನಾಯಕ ಮಂಟಪದಲ್ಲಿ ರಾಷ್ಟ್ರಪತಿ, ರಾಜ್ಯಪಾಲ ಹಾಗೂ ಮುಖ್ಯಮಂತ್ರಿಗಳನ್ನು ವೇದೋಕ್ತ ಆಶೀರ್ವದಿಸಲಾಯಿತು ತಿ ತಿ ದೇ ಅಧ್ಯಕ್ಷರಾದ ಶ್ರೀ ಟಿ ಸುಬ್ಬರಾಮಿರೆಡ್ಡಿ ಪ್ರಸಾದ ವಿನಿಯೋಗ ಮಾಡಿದರು ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದರು ಸ್ವಾಮಿ ಪದಕಗಳನ್ನು ಬಹುಮಾನಿಸಿದರು

ಈ ಮೊದಲು ರಾಷ್ಟ್ರಪತಿಗಳನ್ನು ರೇಷ್ಮೆವಸ್ತ್ರದಿಂದ ತಿ ತಿ ದೇ ದರ್ಮಕರ್ತರ ಮಂಡಳಿಯ ಸದಸ್ಯರಾದ ಶ್ರೀಮತಿ ದಾಸರಿ ಪದ್ಮ ಅವರು ಸತ್ಕರಿಸಿದರು

ಅನಂತರ ರಾಷ್ಟ್ರಪತಿ ದಂಪತಿಗಳು ರಾಜ್ಯಪಾಲರು, ಮುಖ್ಯಮಂತ್ರಿಗಳು ಸ್ವಾಮಿಯ ಊಂಜಲ್ ಸೇವೆಯಲ್ಲಿ ಪಾಲುಗೂಂಡಿದ್ದರು ಸ್ವಾಮಿ ದರ್ಶನಕ್ಕೆ ಮೊದಲು ರಾಷ್ಟ್ರಪತಿಗಳು ಸ್ವಾಮಿಗೆ ತಲೆಗೂದಲನ್ನು ಅರ್ಪಿಸಿದರು

ಜುಲೈ 28 ರಂದು ಬೆಳಗ್ಗೆ ಸ್ವಾಮಿಸುಪ್ರಬಾತ, ತೋಮಾಲೆಸೇವೆ, ಅರ್ಚನೆಗಳಲ್ಲಿ ರಾಷ್ಟ್ರಪತಿ ದಂಪತಿಗಳು ಪಾಲುಗೊಂಡರು ಶ್ರೀಮತಿ ವಿಮಲಾಶರ್ಮ ಅವರು ದೇವಾಲಯದಲ್ಲಿ ಉರುಳುಸೇವೆಯನ್ನು ಸಲ್ಲಿಸಿದರು

ತಿರುಮಲೆಯಿಂದ ರಾಷ್ಟ್ರಪತಿ ದಂಪತಿಗಳು ತಿರುಪತಿಯ ಮಾರ್ಗವಾಗಿ ತಿರುಚಾನೂರು ಪದ್ಮಾವತೀ ಅಮ್ಮನವರ ದೇವಾಲಯವನ್ನು ಸೇರಿ ಅಮ್ಮನವರನ್ನು ಆರಾಧಿಸಿದರು ಆಲಯದ ಬಳಿ ಪೂರ್ಣಕುಂಭಸ್ವಾಗತ ಪಡೆದ ರಾಷ್ಟ್ರಪತಿಗಳೊಡನೆ ರಾಜ್ಯಪಾಲ ಶ್ರೀ ಕೃಷ್ಣಕಾಂತ್ ಮುಖ್ಯಮಂತ್ರಿ ಶ್ರೀ ಎನ್ ಜನಾರ್ದನ ರೆಡ್ಡಿ ಅವರುಗಳು ಇದ್ದರು

### ವೈಬವದ ಆನಿವರ ಆಸ್ಥಾನ

ದಕ್ಷಿಣಾಯನ ಪುಣ್ಯಕಾಲ ಸಂದರ್ಭವಾಗಿ 1992 ಜುಲೈ 16ನೇ ತಾರೀಖಿನಂದು ತಿರುಮಲೆಯಲ್ಲಿ ಆನಿವರ ಆಸ್ಥಾನ ಉತ್ಸವ ವೈಭವದಿಂದ ನಡೆಯಿತು ತಿರುಮಲೆಯ ಸ್ವಾಮಿ ದೇವಾಲಯದ ಬಂಗಾರದ ಬಾಗಿಲಬಳಿ ಶ್ರೀದೇವಿ ಭೂದೇವಿಯರೊಡನೆ ಶ್ರೀಮಲೆಯಪ್ಪಸ್ವಾಮಿಯನ್ನು ಒಡ್ಡೋಲಗದಲ್ಲಿ ಕೂರಿಸಿ, ಸಂಪ್ರದಾಯಾನುಸಾರವಾಗಿ ಪೆದ್ದಜಿಯಂಗಾರ್ಯರಿಗೆ ಚಿನ್ನ ಜಿಯಂಗಾರ್ಯರಿಗೆ ತಿ ತಿ ದೇ ಕಾರ್ಯನಿರ್ವಹಣಾದಿಕಾರಿ ಶ್ರೀ ಎಂ ವಿ ಎಸ್ ಪ್ರಸಾದರಿಗೆ ದೇವಾಲಯದ ಬೀಗದ ಕೈಗಳನ್ನು ಕೊಡುತ್ತ ತೀರ್ದಪ್ರಸಾದಗಳನ್ನು ನೀಡಲಾಯಿತು ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಜನಾರ್ದನನಾಯುಡು, ಧರ್ಮಕರ್ತರ ಮಂಡಳಿ ಸದಸ್ಯರು ಶ್ರೀಮತಿ ದಾಸರಿ ಪದ್ಮ ತಿರುಮಲೆಯ ಆಲಯ ಉಪಕಾರ್ಯನಿರ್ವಹಣಾಧಿಕಾರಿ ಶ್ರೀ ಪಟ್ಟಾಭಿ [illegible] ಗಳ್ಳರು ಬಾಗವ[illegible] ಯನ್ನು ಅಲಂಕ್ಕ[illegible] ಪಲ್ಲಕ್ಕಿಯಲ್ಲಿ [illegible]

ಈ ಮೊದಲು [illegible] ವಾಗಿ ಜುಲೈ 14 ರಂದು [illegible] ಯದಲ್ಲಿ ಕೋಯಿಲ್ ಆಳ್ವಾರ್ [illegible] ಯಿತು

### ದರ್ಮಕರ್ತರ ಮಂಡಳಿಯ ತೀರ್ಮಾನಗಳು

ಜೂನ್ 23 ರಂದು ತಿ ತಿ ದೇ ದರ್ಮಕರ್ತರ ಮಂಡಳಿ ಸಮಾವೇಶ ನಡೆದು ಜೂನ್ 24 ರಂದು ಅದ್ಯಕ್ಷ ಶ್ರೀ ಟಿ ಸುಬ್ಬರಾಮಿರಡ್ಡಿಯವರು ಮುಖ್ಯ ತೀರ್ಮಾನಗಳನ್ನು ಪತ್ರಿಕಾ ವರದಿಗಾರರಿಗೆ ನೀಡಿದರು

ಹಿಮಾಲಯದ ಉತ್ತರಖಂಡದ ಓಂಕಾರಾನಂದ ಸಂಸ್ಥೆಯವರು ಶ್ರೀವೆಂಕಟೇಶ್ವರ ಸ್ವಾಮಿ ಶ್ರೀ ಪದ್ಮಾವತೀ ಅಮ್ಮನವರ ವಿಗ್ರಹಗಳನ್ನು ಸ್ಥಾಪಿಸಲು ನಿರ್ದರಿಸಿರುವುದಾಗಿಯೂ, ಅವಕ್ಕಾಗಿ ತಕ್ಕ ವಿಗ್ರಹಗಳನ್ನು ಸರಬರಾಜು ಮಾಡಬೇಕೆಂದೂ ತೀರ್ಮಾನಿಸಲಾಯಿತು

ಸ್ವಿಟ್ಜರ್‌ಲೆಂಡ್ ದೇಶದಲ್ಲೂ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ವಿಗ್ರಹಗಳನ್ನು ಸರಬರಾಜು ಮಾಡಲು ತೀರ್ಮಾನಿಸಲಾಯಿತು

ತಿರುಮಲೆಯಲ್ಲಿ ಸ್ವಾಮಿ ಕಲ್ಯಾಣಮಂಟಪ ನಿರ್ಮಾಣಕ್ಕೆಂದು 12 ಕೊಟಿ ರೂಪಾಯಿಗಳ ಅಂದಾಜು ವೆಚ್ಚ ಮಾಡಲು ತೀರ್ಮಾನಿಸಲಾಗಿದ್ದು, ಈ ಕಾರ್ಯ ಎರಡು ವರ್ಷಗಳಲ್ಲಿ ಪೂರ್ಣಗೊಳ್ಳುವುದೆಂದೂ, ಇದರಿಂದ ಐದುಸಾವಿರ ಮಂದಿಗೆ ಸ್ಥಳಾವಕಾಶವಾಗುವುದೆಂದೂ ತೀರ್ಮಾನಿಸಲಾಗಿದೆ

ತಿರುತ್ತಣಿ, ರಾಮೇಶ್ವರಗಳಲ್ಲಿನ ತಿ ತಿ ದೇ ಧರ್ಮಸತ್ರಗಳ ನಿರ್ವಹಣೆಯನ್ನು ತಿ ತಿ ದೇ ಗಳೇ ನಿರ್ವಹಿಸಬೇಕೆಂದು ತೀರ್ಮಾನಿಸಲಾಗಿದೆ.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅದವಾ ಸುಲಬ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಬದರದ ಆಹಾರದ ಪೊಟ್ಟಣಗಳ ಮಾರಾಟ

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ

* ಯಾತ್ರಿಕರ ವಾಚನಾಬಿರುಚಿಯನ್ನು ಹೆಚ್ಚಿಸುವ ತಿ ತಿ ದೇ ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಬಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ ಕ್ಯಾಂಟೀನ್

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿದ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅದಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ**

ಗಮನಿಕೆ ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ ಜೊತೆಗೆ ಪ್ರದಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ

**ತಿ ತಿ ದೇ ಉದ್ಯೋಗಿಗಳಿಗೆ ಡಾಕ್ಟರೇಟ್**

ತಿರುಮಲ ತಿರುಪತಿ ದೇವಸ್ಥಾನಗಳ ಶ್ರೀ ವೆಂಕಟೇಶ್ವರ ಪ್ರಾಕ್ತನ ವಸ್ತುಪ್ರದರ್ಶನಶಾಲೆಯ ಅಧಿಕಾರಿಗಳಾದ ಡಾ॥ ವಿ ಎಸ್ ರವಿ ಯವರಿಗೆ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯ ಡಾಕ್ಟರೇಟ್ ನೀಡಿದೆ. ಶ್ರೀ ಯುತರು "ಕಾಂಟ್ರಿಬ್ಯೂಷನ್ ಆಫ್ ಆಂಧ್ರ ಎಪಿಗ್ರಫಿ ಟು ಟೆಂಪಲ್ ಆರ್ಕಿಟೆಕ್ಚರ್" ಎಂಬ ಪರಿ [illegible]





ಶ್ರೀ [illegible] ವಿಶ್ವವಿದ್ಯಾನಿಲಯಕ್ಕೆ [illegible]

ತಿ [illegible] ವಿಭಾಗದಲ್ಲಿ ಕೆಲಸ ಮಾಡುತ್ತಿ [illegible] ಅವರ [illegible] "[illegible] ದತ್ತ" ವಿಷಯ [illegible] ವಿಶ್ವವಿದ್ಯಾನಿಲಯ ತೆಲುಗು ವಿಭಾಗದಲ್ಲಿ ಡಾಕ್ಟರೇಟ್ [illegible]

## ಕೋಲಾರದಲ್ಲಿ ವೈಭವದ ಗಣೇಶೋತ್ಸವ

ಕೋಲಾರದ ಹಳೇಮಾಧ್ಯಮಿಕ ಶಾಲೆಯ ಆವರಣದಲ್ಲಿ ದಿನಾಂಕ 31 8 92 ರಿಂದ 6 9- 92 ರವರೆಗ ಅತ್ಯಂತ ವೈಭವದಿಂದ ಗಣೇಶೋತ್ಸವವು ಸಾರ್ವಜನಿಕ ಗಣೇಶೋತ್ಸವ ಸಮಿತಿಯ ಆಶ್ರಯದಲ್ಲಿ ನಡೆದು ಯಶಸ್ವಿಯಾಯಿತು

31 8 92 ರಂದು ಬೆಳಗ್ಗೆ ಹತ್ತು ಗಂಟೆಗೆ ಸರಿಯಾಗಿ ಮಾಧ್ಯಮಿಕ ಶಾಲೆಯ ಆವರಣದಲ್ಲಿ ಸ್ಥಾಪಿಸಲಾದ ಐದು ಅಡಿ ಎತ್ತರದ ಧವಳ ಗಣಪತಿಯ ಪ್ರಾಣಪ್ರತಿಷ್ಠಾ ಉತ್ಸವವು ಸಾಂಗವಾಯಿತು ಅಂದು ಗಣಪತಿಯ ಪ್ರಸಾದವಾದ ಹಣ್ಣುಗಳನ್ನು ಊರಿನ ಆಸ್ಪತ್ರೆಯ ರೋಗಿಗಳಿಗೆ ವಿತರಣೆ ಮಾಡಲಾಯಿತು

ದಿನವೂ ಪ್ರಾತಃ ಕಾಲಗಳಲ್ಲಿ ಗಣಪತಿಯ ಪೂಜಾ ಉತ್ಸವಗಳೂ ಸಂಜೆಗಳಲ್ಲಿ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳೂ ನಡೆದವು. ವಿದ್ವಾನ್ ರಾಮಪ್ಪ ವೃಂದ, (ನಾದಸ್ವರ) ಶ್ರೀ ಮೈಸೂರು ಅನಂತ ಸ್ವಾಮಿ - ಭಕ್ತಿ ಸಂಗೀತ, ಕೋಲಾರದ ಪತಂಜಲಿ ಯೋಗ ಕೇಂದ್ರದವರಿಂದ ಯೋಗ ಪ್ರದರ್ಶನ, ವನಿತಾ ಮೈತ್ರಿಕೂಟದ ರಸಮಂಜರಿ, ಶ್ರೀ ಕೆ ಆರ್ ಗೋಪಾಲಕೃಷ್ಣರ ಸುಗಮ ಸಂಗೀತ, ಕನಕ ಮಹಿಳಾ ಮಂಡಳಿಯಿಂದ ರಸಮಂಜರಿ, ಕನ್ನಡ ಮಿತ್ರರಿಂದ ಕಲಿಕಂರೀರವ ನಾಟಕ, ಶ್ರೀ ಕೆ ಎಸ್ ರಾಮು ವೃಂದದವರಿಂದ ನೃತ್ಯರೂಪಕಗಳು ನಡೆದವು.

6--9--92 ರ ಭಾನುವಾರ ಸಂಜೆ ಭವ್ಯವಾದ ಊರ ಮೆರವಣಿಗೆಯಲ್ಲಿ ಗಣೇಶ ನಿಮಜ್ಜನೋತ್ಸವ ನಡೆಯಿತು ಮೆರವಣಿಗೆಯಲ್ಲಿ ಎಸ್ ಪಿ ಶ್ರೀ ದೊರೆಸ್ವಾಮಿ ನಾಯಕ ಭಾಗವಹಿಸಿದ್ದರು

ಕಾರ್ಯಕ್ರಮಗಳಲ್ಲಿ ಪುರಪ್ರಮುಖರೊಡನೆ ಕನ್ನಡ ಸಂಸ್ಕೃತಿ ಇಲಾಖೆ, ಸಂಗೀತ ನೃತ್ಯ ಅಕಾಡಮಿ, ಮೊದಲಾದ ಸಕ್ರಿಯವಾಗಿ ಪಾಲುಗೊಂಡಿದ್ದವು. ✹

# ತಿಂಗಳಿನ ಮುಖ್ಯದಿನಗಳು

## ನವಂಬರ್ --- 1992

| | |
|---|---|
| 1 ಬಾನುವಾರ | ಕರ್ನಾಟಕ ರಾಜ್ಯೋತ್ಸವ |
| 2 ಸೋಮವಾರ | ವೇದಾಂತ ದೇಶಿಕರ ಶಾತ್ತುಮೊರೆ |
| | ಪಿಳ್ಳೈ ಲೋಕಾಚಾರ್ಯ ವರ್ಷ ತಿರುನಕ್ಷತ್ರ |
| | ಪೊಯ್‌ಗೈ ಆಳ್ವಾರ್ ವರ್ಷ ತಿರುನಕ್ಷತ್ರ |
| 3 ಮಂಗಳವಾರ | ಪೂದತ್ತಾಳ್ವಾರ್ ವರ್ಷ ತಿರುನಕ್ಷತ್ರ |
| 4 ಬುದವಾರ | ಯಾಜ್ಞವಲ್ಕ್ಯ ಜಯಂತಿ |
| 5 ಗುರುವಾರ | ಪೇಯಾಳ್ವಾರ್ ವರ್ಷತಿರುನಕ್ಷತ್ರ |
| 6 ಶುಕ್ರವಾರ | ನಾರಾಯಣವನದಲ್ಲಿ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವಾರಂಬ |
| 10 ಮಂಗಳವಾರ | ನಾರಾಯಣವನದಲ್ಲಿ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವ ಸಮಾಪ್ತಿ |
| 20 ಶುಕ್ರವಾರ | ತಿರುಚಾನೂರಿನಲ್ಲಿ ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವಾರಂಬ ಅಂಕುರಾರ್ಪಣೆ |
| 25 ಬುದವಾರ | ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವದಲ್ಲಿ ಗಜವಾಹನ |
| 29 ಬಾನುವಾರ | ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವದಲ್ಲಿ ಧ್ವಜಾವರೋಹಣ |
| | ತಿರುಮಂಗೈ ಆಳ್ವಾರ್ ಉತ್ಸವಾರಂಬ |
| 30 ಸೋಮವಾರ | ಸುಬ್ರಹ್ಮಣ್ಯ ಷಷ್ಠಿ |

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ನವಂಬರ್ 1992

**ಸನಾತನ ಧರ್ಮ**
--ಎಚ್ ವಿ ನರಸಿಂಹಮೂರ್ತಿ

**ಭಾಗವತ ಧರ್ಮ**
--ಎ ಎಚ್ ಚಚಡಿ

**ಅನ್ನಮಯ್ಯ -- ವಿದ್ಯಾಭ್ಯಾಸ**
--ಬ ನ ಗುಂಡೂರಾವ್

**ವೈಭವದ ವೈರಮುಡಿ**
- ಬಿ ಎಸ್ ಮಣಿ

**ದೀಕ್ಷಿತರ ನವಾವರಣ ಕೀರ್ತನೆಗಳು**
--ಡಾ ವಿ ಎಸ್ ಸಂಪತ್ಕುಮಾರಾಚಾರ್ಯ





ತಿರುಮಲೆ -- ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿದಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಬಿಷೇಕ ಸಮಯದಲ್ಲಿ ಬಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಬಿಷೇಕ ದರ್ಶನ ಪೊಂದಬಹುದು ವಿವಿದೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1 ಶ್ರೀ ವೇದನಾರಾಯಣಸ್ವಾಮಿ ಆಲಯ
--ನಾಗುಲಾಪುರಂ

2 ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ
- ನಾರಾಯಣವನಂ

3 ಶ್ರೀ ವೇಣುಗೋಪಾಲಸ್ವಾಮಿ ಆಲಯ
--ಕಾರ್ವೇಟಿನಗರ

4 ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ
--ಅಪ್ಪಲಾಯಗುಂಟ

5 ಶ್ರೀ ವೆಂಕಟೇಶ್ವರಸ್ವಾಮಿ ಆಲಯ
--ಶ್ರೀನಿವಾಸಮಂಗಾಪುರ

6 ಆಲಯಸಮುದಾಯ --ಹೃಷೀಕೇಶ

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ

**ತಿ ತಿ ದೇವಸ್ಥಾನಗಳು,**
ತಿರುಪತಿ



Edited and published on behalf of T T Devasthanams by K Subba Rao M A, and Printed at T T D Press by M Vijayakumar Reddy, Manager, T T D Press Tirupati 517 507

